ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ ತರಿಸಿಕೊಂಡಲ್ಲಿ ೫ ಆಣೆ ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
★
FEB. 25
1946

ಸಂಪಾದಕರು :
ಹ. ರಾ. ಪುರೋಹಿತ, ಎಂ. ಎ.
ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ
Editor : H. R. Purohit, M. A.

ಸಂಪುಟ ೧೬ ] 卐 ಹುಬ್ಬಳ್ಳಿ ಸೋಮವಾರ ತಾರೀಖು ೨೫ — ೨ — ೧೯೪೬ 卐 [ ಸಂಚಿಕೆ ೪೪

# ಚಿಕ್ಕ ರಾಷ್ಟ್ರಗಳ ಗೋಳು ಕೇಳುವವರೇ ಇಲ್ಲ !

## ಯುಕ್ತರಾಷ್ಟ್ರ ಸಂಘದ ಮೊದಲನೆ ಅಧಿವೇಶನದ ಪಾಠಗಳು—

### ಭದ್ರತಾಮಂಡಲದ ಮೇಲಿಟ್ಟ ಆಶೆ ನಿರಾಶೆ— ಆಕ್ರಮಣಶೀಲತೆ
### ಹಿರಿರಾಷ್ಟ್ರಗಳ ಕಾದಿಟ್ಟ ಗುತ್ತಿಗೆ—ಸೋವಿಯಟ್ ವಿರೋಧಿಗಳ ಕೂಟ

ಜಗತ್ತಿನಲ್ಲಿ ಯುದ್ಧಗಳನ್ನು ಇಲ್ಲದಂತಾಗಿ ಮಾಡಿ, ಮಾನವಕುಲವನ್ನು ಶಾಶ್ವತ ಶಾಂತಿ ಸಮಾಧಾನಗಳಲ್ಲಿ ನೆಲೆಗೊಳಿಸುವ ಸಲುವಾಗಿ ಸ್ಥಾಪಿಸಲ್ಪಟ್ಟ ಯುಕ್ತರಾಷ್ಟ್ರಗಳ ಸಂಘದ ಮೊದಲನೆ ಅಧಿವೇಶನ ಲಂಡನದಲ್ಲಿ ಆರು ವಾರಗಳವರೆಗೆ ಸಾಗಿ ಇದೀಗ ಮುಕ್ತಾಯಗೊಂಡಿದೆ. ಸ್ಯಾನ್ ಫ್ರಾನ್ಸಿಸ್ಕೋದಲ್ಲಿ ಕಳೆದ ಎಪ್ರಿಲದಲ್ಲಿ ನಡೆದ ಯುಕ್ತರಾಷ್ಟ್ರಗಳ ಪ್ರಾಥಮಿಕ ಅಧಿವೇಶನದಲ್ಲಿ ಘಟನೆ, ನಿಯಮಾವಲಿ ಮೊದಲಾದ ಪದ್ಧತಿ ನಿರ್ಣಯದ ಕಾರ್ಯಗಳೇ ಸಾಗಿದ್ದವು. ಮೇಲಾಗಿ ಆಗ ಯುದ್ಧ ಇನ್ನೂ ನಡೆದಿತ್ತು. ಹಿಟ್ಲರನು ಕಟ್ಟಿದ ಗಗನಗೋಪುರ ಸ್ಯಾನ್‌ಫ್ರಾನ್ಸಿಸ್ಕೊ ಸಭೆ ಸಾಗಿದ್ದಾಗಲೆ ಕುಸಿದು ಬಿತ್ತಾದರೂ ಜಪಾನಿ ಸಾಮ್ರಾಜ್ಯವಾದಿಗಳ ಕೈ ಇನ್ನೂ ಸೋತಿರಲಿಲ್ಲ. ಅದುದರಿಂದ ಯುಕ್ತರಾಷ್ಟ್ರಗಳ ಸಂಘದ ಬಗೆಗೆ ನಿಚ್ಚಳವಾದ ಕಲ್ಪನೆಯನ್ನು ಮಾಡಲು ಆಗ ಇನ್ನೂ ಕಾಲ ಕಳೆತಿರಲಿಲ್ಲ. ಭಿನ್ನಾಭಿಪ್ರಾಯಗಳು ಆಗಲೂ ಕಣ್ಣು ತಪ್ಪಿಸಿಕೊಳ್ಳಲಾರದಷ್ಟು ದೊಡ್ಡವಾಗಿದ್ದವು. ಶಾಂತಿಯ ಸ್ಥಾಪನೆಯೊಡನೆ ಆ ಬಿರುಕುಗಳು ಅಗಲಿಸುತ್ತ ಹೋಗುವವೆಂದು ಊಹಿಸಲು ಚಾಣಾಕ್ಷತೆ ಅವಶ್ಯವಾಗಿದ್ದಿಲ್ಲ. ಆದರೆ ಜಾಗತಿಕ ಶಕ್ತಿಗಳು ಸ್ಪಷ್ಟವಾಗಿ ಯಾವ ಹಾದಿ ಹಿಡಿದು ಗುಂಪು ಗಟ್ಟಿಕೊಳ್ಳುವವೆಂಬುದನ್ನು ಊಹಿಸುವದು ಆಗ ಸಾಧ್ಯವಾಗಿರಲಿಲ್ಲ. ಈಗ ಯುಕ್ತರಾಷ್ಟ್ರಗಳ ಲಂಡನ್ ಅಧಿವೇಶನ ಅಂಥ ಊಹೆಗೆ ಸಾಕಷ್ಟು ಸಂಗತಿಗಳನ್ನು ಒದಗಿಸಿಕೊಟ್ಟಿದೆ.

ಯುಕ್ತರಾಷ್ಟ್ರಗಳ ಲಂಡನ ಸಭೆ ಬಹಳ ವಿಶಾಲ ಸ[illegible]ತ್ರವನ್ನು ಅಂತರಿಸಿತೆಂದು ಒಪ್ಪಬೇಕು. [illegible] ಮತ್ತು ಸಾಮಾಜಿಕ ಸಮಿತಿ, ಅಂತರ್ ರಾಷ್ಟ್ರೀಯ ನ್ಯಾಯಸ್ಥಾನ, ಅಂತರ್‌ರಾಷ್ಟ್ರೀಯ ಸೇವಾ ಸಲಹೆ ಸಮಿತಿ ಮೊದಲಾದ ಹಲ ಪ್ರಮುಖ ಸಮಿತಿಗಳು ಅರಿಸಲ್ಪಟ್ಟವು. ಎಲ್ಲಕ್ಕಿಂತ ಮಹತ್ವದ—ಜಗತ್ತಿನ ಭವಿತವ್ಯ ನಿರ್ಣಯ ಮಾಡುವ-ಭದ್ರತಾ ಮಂಡಲವನ್ನೂ ಆರಿಸಿದುದಾಯಿತು.

ಇದರ ಸಮಿತಿಗಳೆಲ್ಲವುಗಳಿಗಿಂತ ಭದ್ರತಾ ಮಂಡಲದ ಮಹತ್ವವೇ ಹೆಚ್ಚು. ಅದರ ಸ್ಥಾಪನೆಯಾದೊಡನೆ ಅದರ ಕೈತುಂಬ ಕೆಲಸಗಳೂ ಬಂದವು. ಅದರ ಮುಂದೆ ಅನೇಕ ದೂರುಗಳು ಮಂಡಿಸಲ್ಪಟ್ಟವು.

### ಬೇಲಿಯೇ ಹೊಲ ಮೇಯುವದು

ವಿಚಿತ್ರವೆಂದರೆ, ಭದ್ರತಾ ಮಂಡಲದ ಮುಂದೆ ಬಂದ ಮತ್ತು ಅದು ತೀರ್ಮಾನಿಸಿದ ಅನೇಕ ದೂರುಗಳಲ್ಲಿ ಪ್ರತಿಯೊಂದರಲ್ಲಿಯೂ ಒಂದಲ್ಲೊಂದು ಹಿರಿ ರಾಷ್ಟ್ರದ ಕೈ ಆಳವಾಗಿ ಮತ್ತು ಬಹಿರಂಗವಾಗಿ ಕೆಲಸ ಮಾಡುತಿದ್ದುದನ್ನು ಕಾಣುತ್ತೇವೆ. ಇದಕ್ಕೆ ಎರಡೇ ಅರ್ಥಗಳಿರಬಲ್ಲವು. ಯುದ್ಧವನ್ನು ನಿರ್ನಾಮ ಮಾಡುವ ಸಲುವಾಗಿ ಹೂಡಿದ ಎರಡನೆ ಮಹಾಯುದ್ಧದಲ್ಲಿ ಕೋಟ್ಯಂತರ ಮನುಷ್ಯ ಪ್ರಾಣಿಗಳನ್ನು ಬಲಿಕೊಟ್ಟ ನಂತರ, ಜಗತ್ತಿನ ಮಾನವದ್ರೋಹಿ ಶಕ್ತಿಗಳ ವಿರುದ್ಧ ಮುಂದಾಳ್ತನ ವಹಿಸಿದ ಪ್ರಮುಖ ರಾಷ್ಟ್ರಗಳೇ ಶಾಂತಿ—ಭದ್ರತೆಗಳ ತಳಹದಿಯ ಮೇಲೆ ಗುದ್ದಲಿಯೆತ್ತಲು ಅಣಿಯಾಗಿವೆಯೆಂದು ತಿಳಿಯಬೇಕು. ಇಲ್ಲವೆ ಬಂದ ದೂರುಗಳೆಲ್ಲವೂ ನೈಜವಾದವುಗಳಲ್ಲ, ಪ್ರಮುಖ ರಾಷ್ಟ್ರಗಳು ತಮ್ಮ ಸ್ವಾರ್ಥ ಸಾಧನೆಗಾಗಿ ಚಿಕ್ಕ ರಾಷ್ಟ್ರಗಳುಕೆಲವನ್ನು ತಮಗಾಗದ ದೊಡ್ಡ ರಾಷ್ಟ್ರಗಳ ವಿರುದ್ಧ ಎತ್ತಿಕಟ್ಟಿರಬೇಕು. ಇವುಗಳಲ್ಲಿ ಯಾವುದಾದರೊಂದು, ಅಥವಾ ಎರಡೂ ಸತ್ಯವಾಗಿರಲೇಬೇಕು.

### ಗುಂಪುಗಳ ರಾಜಕಾರಣ

ಭದ್ರತಾ ಮಂಡಲ ತೀರ್ಮಾನಿಸಿದ ನಾಲ್ಕು ಪ್ರಕರಣಗಳ ಮಂಡನೆಯ ಸ್ವರೂಪವನ್ನು ನೋಡಿದರೆ ಒಂದು ಮಾತು ಸ್ಫುಟವಾಗಿ ಗೋಚರಕ್ಕೆ ಬರುತ್ತದೆ. ಅದೆಂದರೆ, ಜಗತ್ತು ಇನ್ನೊಮ್ಮೆ ಪರಸ್ಪರ ಸ್ಪರ್ಧಿಸುವ ರಾಷ್ಟ್ರಗಳ ಗುಂಪುಗಳಾಗಿ ವಿಂಗಡಿಸಲ್ಪಡುತ್ತಿದೆಯೆಂಬುದು. ಈ ಸ್ಪರ್ಧೆಯಲ್ಲಿ ಪ್ರಮುಖ ರಾಷ್ಟ್ರಗಳು ಚಿಕ್ಕ ರಾಷ್ಟ್ರಗಳನ್ನು ತಮ್ಮ ಪಗಡೆಯಾಟದ ಕಾಯಿಗಳನ್ನಾಗಿ ಉಪಯೋಗಿಸುತ್ತಿವೆ. ಆದರೆ ಈ ದೂರುಗಳ ತೀರ್ಮಾನದಿಂದ ಇನ್ನೊಂದು ಮಾತು ಸಿದ್ಧವಾಗುತ್ತದೆ. ಪ್ರಬಲ ರಾಷ್ಟ್ರಗಳಲ್ಲಿ ಒಂದರ ಹಿತಕ್ಕೆ ಸಂಬಂಧಿಸಿದ ಪ್ರಶ್ನೆಯಲ್ಲಿ ಭದ್ರತಾಮಂಡಲದಿಂದ ನ್ಯಾಯವನ್ನು ಪಡೆಯುವದು ಅಸಾಧ್ಯ. ಆದರೂ ಸದ್ಯಕ್ಕೆ ಪ್ರಬಲ ರಾಷ್ಟ್ರಗಳು ತಂತಮ್ಮೊಳಗೆ ತೀಕ್ಷ್ಣವಾದ ಒಡಕು ಬಂದು ಬೇರೆಬೇರಾಗುವ ಸ್ಥಿತಿಗೆ ಮುಟ್ಟಲು ಧೈರ್ಯಪಡುವದಿಲ್ಲ, ಎಂದೂ ತಿಳಿದುಕೊಳ್ಳಲಡ್ಡಿಯಿಲ್ಲ.

### ಸೋವಿಯೆಟ್ ವಿರೋಧ

ಯುಕ್ತರಾಷ್ಟ್ರ ಸಭೆ ಮತ್ತು ಭದ್ರತಾ ಮಂಡಲ ಇವೆರಡರ ಕಾರ್ಯಕಲಾಪಗಳಲ್ಲಿ ಇನ್ನೊಂದು ಮಾತು ಒಡೆದು ಕಾಣುವಂತಿತ್ತು. ಹಳೆಯ ರಾಷ್ಟ್ರಸಂಘದಲ್ಲಿ ಹೇಗೋ ಹಾಗೆಯೆ ಈ ಹೊಸ ಸಂಸ್ಥೆಯಲ್ಲಿಯೂ ಸದಸ್ಯ ರಾಷ್ಟ್ರಗಳ ಧೋರಣೆ ರಶಿಯಾದ--ಅರ್ಥಾತ್ ಕಮ್ಯೂನಿಜಂದ—ಭೀತಿಯ ಸನ್ನೆಕೋಲಿನ ಸುತ್ತ ಹೊರಳುತಿದೆ. ಮುಖ್ಯ ತಿಕ್ಕಾಟ ರಶಿಯಾ—ಇಂಗ್ಲಂಡುಗಳ ನಡುವೆ ಆದರೆ, ಅಮೇರಿಕೆ ಕೆಲವೊಂದು ವಿಷಯದಲ್ಲಿ ಉಭಯ ರಾಷ್ಟ್ರಗಳಲ್ಲಿ ಸಂಧಾನ ನಡೆಸುವ ಪಾತ್ರವಹಿಸಿ ಇನ್ನು ಕೆಲವು ವಿಷಯಗಳಲ್ಲಿ ಸ್ಥಿರವಾದ ಸೋವಿಯೆಟ್ ವಿರೋಧಕ ನಿಲುವೆಯನ್ನು ಅಂಗೀಕರಿಸಿತು. ಜೀವನ—ಮರಣದ ಹೋರಾಟದಲ್ಲಿ ನಾಲ್ಕು ವರ್ಷ ಕಾಲ ಸಹಭಾಗಿಗಳಾದ ನಂತರವೂ ಪಾಶ್ಚಾತ್ಯ ರಾಷ್ಟ್ರಗಳಿಗೂ ಸೋವಿಯೆಟ್ಟಿಗೂ ನಡುವೆ ಸೌಹಾರ್ದ ಬೇರೂರಿಲ್ಲ, ಬದಲಿಗೆ ಸಂಶಯ ಭಯಗಳು ಬೆಳೆದಿವೆಯೆಂದು ಹೇಳಬೇಕು. ಹಿಂದಿನ ರಾಷ್ಟ್ರಸಂಘದಿಂದ ಹೊರಗುಳಿದು ಯುರೋಪಿಯನ್ ರಾಜಕಾರಣದ ಹೊಲಸಿನಿಂದ ನಿರ್ಲಿಪ್ತವಾಗಿದ್ದು ದಲಿತ ಜನಾಂಗಗಳಿಂದ ಒಂದು ಬಗೆಯ ಆದರವನ್ನು ಗಳಿಸಿದ್ದ ಅಮೇರಿಕೆ ಈ ಬಾರಿ ಈ ಬಲವಂತರ ರಾಜಕಾರಣದ ಸುಳಿಯಲ್ಲಿ ಸಿಲುಕಿ ಸ್ವಾತಂತ್ರ್ಯಪ್ರೇಮಿಗಳು ಅದರಲ್ಲಿಟ್ಟಿದ್ದ ಆಸೆಗೆ ತಣ್ಣೀರೆರಚಿದೆ.

### ಎಲ್ಲ ಸೋಗು !

ಭದ್ರತಾ ಮಂಡಲದ ಮುಂದೆ ಬಂದ ದೂರುಗಳನ್ನು ಒಂದೊಂದಾಗಿ ವಿವೇಚಿಸೋಣ. ಜಾಗತಿಕ ತಿಕ್ಕಾಟಗಳನ್ನು ಬಗೆಹರಿಸಲು ಈ ಮಂಡಲಕ್ಕೆ ೬ ಅಸ್ಥಾಯಿ ಸದಸ್ಯರನ್ನು ಆರಿಸಿ—ಪಂಚಮಹಾರಾಷ್ಟ್ರಗಳು ಅದರ ೫ ಸ್ಥಾಯೀ ಸದಸ್ಯರು— ಅದರ ಘಟನೆಯಾದುದೇ ತಡ, ಅದರ ಮುಂದೆ ದೂರು, ಅದೂ ಪ್ರಬಲ ರಾಷ್ಟ್ರವೊಂದರ ವಿರುದ್ಧ, ಮಂಡಿಸಲ್ಪಟ್ಟಿತು. ಇರಾಣದ ಹಕೀಮಿ ಸರಕಾರಕ್ಕೆ ಈ ಚಕ್ರವನ್ನು ಚಾಲನಗೊಳಿಸಿದ ಶ್ರೇಯಸ್ಸು ಸಲ್ಲಬೇಕು. ಅಝುರಬೈಜಾನ ಪ್ರಾಂತದಲ್ಲಿ ಎದ್ದ ದಂಗೆಯನ್ನು ಬಗ್ಗುಬಡಿಯಲು ಸೈನ್ಯ ಕಳಿಸದಂತೆ ಇರಾಣಿ ಸರಕಾರಕ್ಕೆ ಪ್ರತಿಬಂಧವೊಡ್ಡಿ ಇರಾಣದ ಅಂತರಿಕ ವ್ಯವಹಾರದಲ್ಲಿ ರಶಿಯನ್ನರು ಕೈಹಾಕಿದ್ದಾರೆಂದು ಇರಾಣ ದೂರಿಟ್ಟಿತು ಆದರೆ ಈ ದೂರಿನ ವಿಚಾರಣೆ ಪೂರ್ಣವಾಗುವವರೆಗೂ ಹಕೀಮಿ ಸರಕಾರ ತಾಳದಾಯಿತು. ಸುಲ್ತಾನೆಯವರ ಹೊಸ ಸರಕಾರ ಸ್ಥಾಪಿತವಾಗಿ, ರಶಿಯನ್ನರೊಡನೆ ಸಂಧಾನ ಮಾಡುವ ಇಚ್ಛೆ ವ್ಯಕ್ತಗೊಳಿಸಿದ್ದರಿಂದ ಪ್ರಶ್ನೆ ಪರಸ್ಪರ ವಿಚಾರವಿನಿಮಯಕ್ಕೆ ಬಿಟ್ಟುಕೊಡಲ್ಪಟ್ಟಿತು.

ಈ ಇರಾಣಿ ಪ್ರಶ್ನೆಯಲ್ಲಿ ಗಮನಿಸತಕ್ಕ ಕೆಲ ಸಂಗತಿಗಳಿವೆ. ಮೊದಲನೆಯದಾಗಿ ಇರಾಣಿ ಸರಕಾರ ಮತ್ತು ಮಜಲಿಸ್ ( ಪಾರ್ಲಮೆಂಟ ) ಅತಿ ಪ್ರತಿಗಾಮಿ ಸಂಸ್ಥೆಗಳೆಂದು ಎಲ್ಲರೂ ಒಪ್ಪುತ್ತಾರೆ. ಅಝುರಬೈಜಾನರ ಸ್ವಾತಂತ್ರ್ಯ ಚಳವಳಿಗೆ ರಶಿಯನ್ನರೇ ಪ್ರೇರಣೆ, ಉತ್ತೇಜನಗಳನ್ನಿತ್ತರೆಂದು ನಂಬಿದರೂ ಅವರ ಧ್ಯೇಯ ಉತ್ತರ ಇರಾಣದಲ್ಲಿ ಎಣ್ಣೆ ಸವಲತ್ತುಗಳನ್ನು ಪಡೆಯುವ ಸಲುವಾಗಿ ದೊಣ್ಣೆ ತೋರಿಸುವದೇ ಇತ್ತೆಂದು ಒಪ್ಪಿದರೂ ಅವರು ಇರಾಣದಲ್ಲಿ ಪ್ರತ್ಯಕ್ಷ ಸಶಸ್ತ್ರ ಬಲಾತ್ಕಾರವನ್ನು ಉಪಯೋಗಿಸಲಿಲ್ಲವೆಂದೊಪ್ಪಬೇಕು ಇರಾಣಿ ಸರಕಾರ ಬ್ರಿಟಿಶ ಎಣ್ಣೆಗಣಿ ಆಕಾಂಕ್ಷೆಗೆ ಹೆಚ್ಚು ಅನುಕೂಲವಾಗಿದ್ದು ರಶಿಯನ್ನರದಕ್ಕೆ ಪ್ರತಿಕೂಲತೆ ತೋರಿಸಿದ್ದನ್ನು ಮರೆಯತಕ್ಕದ್ದಲ್ಲ. ಮೇಲಾಗಿ ತನ್ನ ಎಣ್ಣೆಗಣಿಗಳ ಜೀವನಾಡಿಗಳ ಸಮೀಪದಲ್ಲಿ ಗೆಳೆಯ ರಾಜ್ಯವೊಂದಿರಬೇಕೆಂದು ಸೋವಿಯೆಟ್ಟು ಅಪೇಕ್ಷಿಸಿದರೆ ಅದನ್ನು ತಪ್ಪೆಂದು ಹೇಳುವದು ಸಾಧ್ಯವಿಲ್ಲ. ಆದರೂ ಅಫಘಾಣಿಸ್ತಾನದ ಹಿಂದಿನ ಅರಸುಮನೆತನದವರನ್ನು ಹಿಂದುಸ್ತಾನದ ಗಡಿಯಲ್ಲಿ ಬ್ರಿಟಿಶರಿಗೆ ಒಪ್ಪಿಗೆಯಾಗದ ಸರಕಾರ ಸ್ಥಾಪಿಸಲೆಳಸಿದರೆಂದು ಕುತಂತ್ರದಿಂದ ಹಿಂದುಸ್ತಾನಕ್ಕೆ ಬರಮಾಡಿಸಿಕೊಂಡು ಇಲ್ಲಿ ಸೆರೆಹಿಡಿದಿಟ್ಟಿರುವ ಬ್ರಿಟಿಶ ವಿದೇಶ ಮಂತ್ರಿ ಬೆವಿನ್ನರು ಇರಾಣಿ ಪ್ರಶ್ನೆಯಲ್ಲಿ ರಶಿಯನ್ನರ ವಿರುದ್ಧ ಮಾತಾಡಿದರು. ಹೀಗಿರುವಾಗ ಬ್ರಿಟಶರ ಬೆಂಬಲ, ಪ್ರೋತ್ಸಾಹಗಳಿಂದಲೇ ಇರಾಣಿ ಸರಕಾರ ದೂರನ್ನು ಭದ್ರತಾ ಮಂಡಲದ ಮುಂದೆ ತಂದಿತೆಂದು ರಶಿಯನ್ನರು ಭಾವಿಸಿದರೆ ತಪ್ಪೇನು ?

### ಬ್ರಿಟಿಶರ ಟೊಳ್ಳು ವಾದ

ಆದರೆ ಗ್ರೀಸದಲ್ಲಿ ಬ್ರಿಟಿಶರು ನಡೆಸಿದ ಕೃತ್ಯವನ್ನು ನೋಡಿರಿ. ಅಲ್ಲಿ ಅವರು ಸಶಸ್ತ್ರ ಹಸ್ತಕ್ಷೇಪವನ್ನು- ಅದೂ ಪ್ರತಿಗಾಮಿಗಳ ಪಕ್ಷದಲ್ಲಿ- ಕೈಕೊಂಡರು. ಬ್ರಿಟಿಶ ಸೈನಿಕರಲ್ಲದಿದ್ದರೆ ಬ್ರಿಟಶರ ಇಚ್ಛೆಯಂತೆ ಕುಣಿಯುತ್ತಿರುವ ಗ್ರೀಸದ ಈಗಿನ ಸರಕಾರ ಒಂದು ದಿನ ಬದುಕಿರುವದು ಸಾಧ್ಯವಿರಲಿಲ್ಲ. ಇಂಥ ಸ್ಥಿತಿಯಲ್ಲಿಯೂ ಬ್ರಿಟಿಶ ವಿದೇಶ ಮಂತ್ರಿಗೆ, ಗ್ರೀಸದಲ್ಲಿ ಬ್ರಿಟಿಶ ಆಚರಣೆಯಿಂದ ಶಾಂತಿಭಂಗಕ್ಕೆ ಅವಕಾಶವಾಗುವದೆಂದು ಹೇಳಿದರೆ ಭಯಂಕರ ಸಿಟ್ಟು ಬಂತು. ಗ್ರೀಕ ಸರಕಾರವೇ ಬ್ರಿಟಿಶ ಸೈನ್ಯದ ಸಹಾಯ ಕೇಳಿತೆಂಬ ಮಾತು ಹುರುಳಿಲ್ಲದ್ದು. ಏಕೆಂದರೆ ಆ ಸರಕಾರವೇ ಬ್ರಿಟಿಶರ ಕೈವಾಡದ್ದು. ಅದರ ಕೇಳಿಕೆಯಂತೆ ಬ್ರಿಟಿಶ ಸೈನ್ಯ ಕಳಿಸಿದ್ದು ನ್ಯಾಯ್ಯವಾಗಿದ್ದರೆ, ಅಝುರಬೈಜಾನದ ಸ್ವಾಯತ್ತ ಸರಕಾರದ ರಕ್ಷಣೆಗೆ ರಶಿಯನ್ನರು ನಿಂತಿದ್ದು ತಪ್ಪೆಂದು ಬೆವಿನ್ನರು ಹೇಗೆ ಹೇಳಿದರು? ನಿಜವಾಗಿ ಈ ವಿಚಾರದಲ್ಲಿ ಬ್ರಿಟಿಶರೇ ರಶಿಯನ್ನರಿಗೆ ಮೇಲ್ಪಂತಿ ಹಾಕಿಕೊಡಲಿಲ್ಲವೆ?

ಇಂಡೊನೇಶಿಯಾದ ಪ್ರಶ್ನೆ ಬ್ರಿಟಿಶ ಸುಳ್ಳು ಸೊಟ್ಟುಗಳನ್ನು ಇನ್ನಷ್ಟು ಬಯಲಿಗೆಳೆಯಿತು. ಯುಕ್ರೇನಿಯನ್ ಪ್ರತಿನಿಧಿ ಈ ಪ್ರಶ್ನೆಯನ್ನು ಭದ್ರತಾಮಂಡಲದ ಮುಂದೆ ತಂದಾಗ ಬೆವಿನ್ನರು, ತಾವು ಇಂಡೊನೇಶಿಯಾದಲ್ಲಿ ಯುದ್ಧ ಬಂದಿಗಳ ಸಂರಕ್ಷಣೆ, ಜಪಾನಿ ಸೈನಿಕರ ನಿಶ್ಶಸ್ತ್ರೀಕರಣ, ಮುಂತಾದುದಕ್ಕಾಗಿ ಅಲ್ಲಿ ಹೋದುದಾಗಿ ಹೇಳಿದರು. ರಾಷ್ಟ್ರೀಯ ಚಳವಳಿಯನ್ನು ತಾವು ಹತ್ತಿಕ್ಕುತ್ತ ಇಲ್ಲವೆಂದೂ ಅವರ ವಾದವಾಗಿತ್ತು. ಆದರೆ ಜಾವಾದಲ್ಲಿ ಬ್ರಿಟಿಶ ಕ್ರಿಯೆ ಆರಂಭವಾದ ಸಮಯದಲ್ಲಿ ಬೆವಿನ್ನರು ಬಹಿರಂಗವಾಗಿ "ಡಚ್ಚರ ಸಾಮ್ರಾಜ್ಯವನ್ನು ಪುನಃ ಅವರಿಗೆ ಕೊಡಿಸುವದು ಬ್ರಿಟಿಶ ಸರಕಾರದ ಕರ್ತವ್ಯ" ಎಂದು ಹೇಳಿದ್ದುದನ್ನು ಜಗತ್ತು ಇಷ್ಟು ಬೇಗ ಮರೆತಿರಬಹುದೆಂದು ಅವರು ಎಣಿಸಿದ್ದರೇನೊ. ಬೆವಿನ್ನರು ಇಂಡೊನೇಶಿಯಾಕ್ಕೆ ಯುಕ್ತರಾಷ್ಟ್ರ ವಿಚಾರಣಾ ಮಂಡಲ ಕಳಿಸುವ ಏರ್ಪಾಡನ್ನು ಕೂಡ ಒಪ್ಪಲು ಸಿದ್ಧರಾಗಲಿಲ್ಲ. ಮಾತ್ರವಲ್ಲ, ಅಲ್ಲಿಯ ರಾಷ್ಟ್ರೀಯ ಚಳವಳಿಯನ್ನು ಹತ್ತಿಕ್ಕುವದಿಲ್ಲವೆಂದು ಬ್ರಿಟಿಶರು ಆಶ್ವಾಸನ ಕೊಡಬೇಕೆಂಬ ಇಜಿಪ್ತದ ಸೂಚನೆ ಕೂಡ ಅವರಿಗೆ ಒಗ್ಗಲಿಲ್ಲ.

### ಇಲ್ಲಿ ನೆವವೇ ಇದ್ದಿಲ್ಲ

ಸೀರಿಯಾ - ಲೆಬನಾನ್‌ಗಳ ಪ್ರಶ್ನೆಯಂತೂ ಪಾಶ್ಚಿಮಾತ್ಯ ರಾಷ್ಟ್ರಗಳ ನಾಚಿಕೆಗೇಡಿತನದ ಪರಮಾವಧಿಯ ಹೆಗ್ಗುರುತಾಗಿದೆ. ಸಂಬಂಧಪಟ್ಟ ರಾಷ್ಟ್ರಗಳೆ ಭದ್ರತಾಮಂಡಲಕ್ಕೆ ಬ್ರಿಟಿಶ ಫ್ರೆಂಚ ಸೈನ್ಯಗಳು ತಮ್ಮ ರಾಜ್ಯದಲ್ಲಿರಕೂಡದೆಂದು ಬೇಡಿಕೊಂಡಿದ್ದವು. ಆ ರಾಷ್ಟ್ರಗಳು ಯುಕ್ತರಾಷ್ಟ್ರಗಳ ಸದಸ್ಯರು. ಅವರ ಸ್ವಾತಂತ್ರ್ಯವನ್ನು ಒಪ್ಪಿಕೊಳ್ಳಲಾಗಿತ್ತು. ಅಲ್ಲಿ ಶತ್ರುಸೈನ್ಯಗಳನ್ನು ನಿಶ್ಶಸ್ತ್ರಗೊಳಿಸುವ ಪ್ರಶ್ನೆ ಇದ್ದಿಲ್ಲ. ಅಂತರಿಕ ಭಿನ್ನಾಭಿಪ್ರಾಯ ದಂಗೆಗಳ ಹೆಸರಿನಲ್ಲೂ ಬ್ರಿಟಿಶ ಫ್ರೆಂಚ ಸೈನ್ಯಗಳು ಅಲ್ಲಿ ಉಳಿಯಬೇಕಾದದ್ದು ಇದ್ದಿಲ್ಲ. ಆ ಸೈನ್ಯಗಳು ಹೊರಟು ಹೋಗಲು ಇದ್ದ ತೊಂದರೆಯೆಂದರೆ ಆಂಗ್ಲೋ-ಫ್ರೆಂಚರಲ್ಲಿದ್ದ ಭಿನ್ನಾಭಿಪ್ರಾಯ. ಅದು ಸಿರಿಯಾ ಲೆಬನಾನಗಳ ತಪ್ಪಲ್ಲ. ಆದರೂ ಆಂಗ್ಲೋ ಫ್ರೆಂಚರು "ನಾವು ಅಲ್ಲಿ ಅನಿರ್ದಿಷ್ಟ ಅವಧಿಯವರೆಗೆ ಉಳಿಯಬಯಸುವದಿಲ್ಲ" ಎಂಬ ಸಂದಿಗ್ಧ

( ೧೬ ನೇ ಪುಟ ನೋಡಿರಿ )

# “ಎಲ್ಲ ಸತ್ಕಾರ ನನ್ನ ತಾಯಿಗೆ ಸೇರಿದ್ದು”

## ಚಿನ್ನಹಬ್ಬದ ಸತ್ಕಾರ ಸಮಾರಂಭದಲ್ಲಿ
## ಕವಿವರ ಬೇಂದ್ರೆಯವರ ವಿನಯೋಕ್ತಿ
## ಧಾರವಾಡದಲ್ಲಿ ಬೇಂದ್ರೆ ಸತ್ಕಾರೋತ್ಸವದ ಒಂದು ನೋಟ

“ಬಡತನ ಒಡೆತನ ಕಡೆತನಕುಳಿದಾವೇನ”
—ಬೇಂದ್ರೆ

ಅಂದು ರವಿವಾರ. ದಿನಾಂಕ ಫೆಬ್ರುವರಿ ೧೭. ಮಧ್ಯಾನ್ಹ ನಾಲ್ಕು ಗಂಟೆಗೆ ಧಾರವಾಡದ ಸ್ಟೇಶನದ ಹೆದ್ದಾರಿಯಿಂದ ನಗರಾಭಿಮುಖವಾಗಿ ಹೊರಟೆ ನಾಲ್ಕು ನಾಲ್ಕು ಹೆಜ್ಜೆಗೆ ಜನರ ತಂಡಗಳು ನನ್ನ ಮಾರ್ಗವನ್ನನುಸರಿಸಿ ನಡೆಯುತ್ತಿದ್ದುದು ಕಂಡು ಬಂತು. ರವಿವಾರದ ದಿನ ಇಷ್ಟು ತ್ವರೆಯಿಂದ ಇವರೆಲ್ಲ ಹೊರಟಿರುವದೆಲ್ಲಿಗೆ ಎಂದು ತಲೆತುರಿಸುತ್ತ ಸಾಗಿದಾಗ ‘ಒಂದೆ ಕರ್ನಾಟಕ ಒಂದೇ’ ಎಂಬ ಗೀತವನ್ನು ಗುಣುಗಟ್ಟುತ್ತ ವಿದ್ಯಾರ್ಥಿನಿಯರ ತಂಡವೊಂದು ನನ್ನನ್ನು ದಾಟಿ ಹೋಯಿತು. ಅಷ್ಟರಲ್ಲಿಯೇ ಬೆನ್ನು ಹಿಂದೆ ಕೆಲ ಕಾಲೇಜದ ‘ವಿದ್ಯಾರ್ಥಿಗಳು ಜಾಗಾ ಸಿಗಲಿಕ್ಕಿಲ್ಲ, ನಡಿ ಮುನಸಿಪಾಲಿಟಿಗೆ ಲಗೂನ’ ಅನ್ನುತ್ತ ವೇಗವಾಗಿ ಹೊರಟಿದ್ದರು. ನಾನೂ ಕುತೂಹಲದಿಂದ ಅವರನ್ನನುಸರಿಸಿದೆ. ಕನ್ನಡದ ಕಾರ್ಯಕ್ರಮ ಏನೋ ಇರಬಹುದೆಂದುಕೊಂಡೆ. ಫಕ್ಕನೆ ನೆನಪಿಗೆ ಬಂತು ‘ಅಂಬಿಕಾತನಯದತ್ತ’ರ ಚಿನ್ನಹಬ್ಬ ಇಂದು ಎಂದು ಎಲ್ಲಿಯೊ ಓದಿದಂತೆ. ಓ! ನಮ್ಮ ಕವಿ, ಅವನ ಚಿನ್ನಹಬ್ಬ. ಅಪೂರ್ವ ಯೋಗವೆಂದುಕೊಂಡೆ.

ನಗರಸಭೆಯ ಅಟ್ಟದ ಪಾವಟಿಗೆಗಳನ್ನು ಜಿಗಿಯುತ್ತ ಏರಿ ಸಂದಣಿಯೊಳಗಿಂದ ತೂರಿಕೊಂಡು ವ್ಯಾಸಪೀಠದ ಮುಂದೆ ಕುಳಿತೆ. ಕೆಳಗೆ ಕೂಡಲೊಲ್ಲದ ಗಂಡಸರಿಗಾಗಿ ಖುರ್ಚಿಗಳಿದ್ದರೂ ಎತ್ತಿ ಆಡಿಸುವ ತಾಯಂದಿರಿಗಾಗಿ ಗುಡಾರ ಸಿದ್ಧವಾಗಿತ್ತು. ವ್ಯಾಸಪೀಠದ ಅಲಂಕಾರ, ಹಿಂದಿನ ಕರ್ನಾಟಕದ ದೊಡ್ಡ ನಕಾಶವನ್ನು ನೋಡುತ್ತಿರುವಾಗ ಶ್ರೀ ಬೇಂದ್ರೆಯವರು ಮಂದವೀಡು ಕೃಷ್ಣರಾಯರನ್ನು ಕೂಡಿಕೊಂಡು ಬಂದರು. ಸ್ವಸ್ಥಾನಾಸೀನರಾದರು. ನಡೆಯಿತು ನಾಡಗೀತೆ ‘ಉದಯವಾಗಲಿ’. ನಂತರ ಶ್ರೀ ಬೇಂದ್ರೆಯವರ ‘ಒಂದೇ ಕರ್ನಾಟಕ ಒಂದೇ’ ಪ್ರಾರಂಭವಾಯಿತು. ಕಿವಿ ನಿಗುರಿದರೂ ಮೈನವಿರೇಳಲಿಲ್ಲ ಇಂದಿನ ದಿನದಲ್ಲಿ ‘ಒಂದೇ ಕರ್ನಾಟಕ ಒಂದೇ’ ನಮ್ಮ ನಾಡಗೀತೆಯಾಗಬಾರದೆ?

### ವೈವಿಧ್ಯದ ಕಾಣಿಕೆಗಳು

ನಂತರ ಬೇಂದ್ರೆ ಸತ್ಕಾರ ಸಮಿತಿಯ ಅಧ್ಯಕ್ಷರಾ. ಬ. ಸಬನೀಸರು ಈ ಸತ್ಕಾರವೇಕೆ ಎಂಬುದನ್ನು ಹೇಳಿದರು. ಉತ್ಸವ ಸಮಿತಿಯ ಹಿರಿಯರು ಪ್ರೊ. ಮಾಳವಾಡರು, ಈ ಉತ್ಸವ ಇಲ್ಲಿಯೆ ಏಕೆ ನಡೆದದ್ದೆಂಬುದನ್ನು ತಿಳಿಸಿದರು. ಕವಿವರನಿಗೆ ಅರ್ಪಿಸಲು ಸುಮಾರು ೫೫೦೦ ರೂ. ನಿಧಿ ಕೂಡಿಸಿದ್ದಾರಂತೆ. ಬೇಸಿಗೆಯ ವರೆಗೆ ಇನ್ನೂ ಕೂಡಿಸಿ ಮೇದಲ್ಲಿ ಅರ್ಪಿಸುವರಂತೆ. ಗಲಗಲಿಯ ಗೆಳೆಯರು! ‘ಬೇಂದ್ರೆ ವಾಙ್ಮಯದರ್ಶನ’ ಗ್ರಂಥವನ್ನೂ ಹುಬ್ಬಳ್ಳಿ ಸತ್ಕಾರ ಸಮಿತಿಯವರು ನಾಲ್ಕೆ ತಾಸಿನಲ್ಲಿ ಬರೆಸಿದ ಕವಿವರನ ಚಿತ್ರವನ್ನೂ ಒಬ್ಬ ಮಹಿಳೆ ಕೂದಲಿನಿಂದ ಬಟ್ಟೆಯಲ್ಲಿ ಹೆಣೆದ ಗಾಂಧೀಜಿ, ಬಾ, ಕೃಷ್ಣರ ಚಿತ್ರಗಳನ್ನೂ ಅರ್ಪಿಸಿದರು.

ಬಳಿಕ ೭೫ ವರ್ಷದ ತರುಣ ಮುದವೀಡರು ಇಂದಿನ ಹಬ್ಬದ ಅಧ್ಯಕ್ಷರಾಗುವ ತಮ್ಮ ಭಾಗ್ಯವನ್ನು ಕಂಡು ಸಂತೋಷಿಸಿ ಇಂಥ ಅನೇಕ ಉತ್ಸವಗಳು ನಡೆಯಲಿ ಎಂದು ಹಾರೈಸಿ ಈ ಕವಿವರನ ಗುಣಗಾನ ಮಾಡುವವರು ಒಬ್ಬೊಬ್ಬರಾಗಿ ಬರಲಿ ಎಂದರು.

### ಗುಣಗಾನ

ನಮ್ಮ ಕವಿವರನ ಗುಣಗಾನಕ್ಕಾಗಿ ಮೊದಲಿಗೆ ಎದ್ದು ಬಂದ ಶ್ರೀ ಬೆಟಗೇರಿ ಕೃಷ್ಣಶರ್ಮರು ‘ಅಂಬಿಕಾತನಯದತ್ತ’ರ ಕಾವ್ಯಗಳಲ್ಲಿ ಅಂದಿನಿಂದ ಇಂದಿನ ವರೆಗೆ ೩೦ ವರ್ಷಗಳ ದೀರ್ಘಾವಧಿಯಲ್ಲಿಯೂ ನೂತನತೆಯಿದೆ ಎಂದರು. ಪ್ರೊ. ಧಾರವಾಡರು ಕನ್ನಡದ ಸಮಕಾಲೀನ ಕವಿಗಳಿಗೆ ಮನ್ನಣೆ ದೊರೆತದ್ದು ಇತ್ತೀಚೆಗೆ ಇದೇ ಮೊದಲು ಎಂದು ಅಭಿನಂದಿಸಿದರು. ಇಂಗ್ಲೀಷ ಪ್ರೊ. ಮೆನೆಝುಸರಿಗೆ ಶ್ರೀ ಬೇಂದ್ರೆಯವರ ಕಾವ್ಯ ಹುಚ್ಚು ಹಿಡಿಸಿದೆಯಂತೆ. ಇವರು ಕವಿವರನ ೨ ಕವನಗಳನ್ನು ಇಂಗ್ಲಿಷಕ್ಕೆ ಭಾಷಾಂತರಿಸಿದನ್ನು ಅವರಿಗೆ ಅರ್ಪಿಸಿದರಲ್ಲದೆನಂತರ ಕಾವ್ಯಗಾಯನದ ಕಾಲಕ್ಕೆ ಶ್ರೀಭಾಗವತರ ಸಹಾಯದಿಂದ ಓದಿತೋರಿಸಿದರು. ‘ಎನ್ಕೆ’ ಅವರು ಬೇಂದ್ರೆಯವರ ಕಾವ್ಯವೇ ಜೀವನ, ಜೀವನವೇ ಕಾವ್ಯ ಎಂದು ಸೂತ್ರರೂಪವಾಗಿ ಹೇಳಿ ಕಾವ್ಯ ತನ್ಮಯವಾಗಿದೆ ಬೇಂದ್ರೆಯವರ ಜೀವನ, ಎಂದರು. ಶ್ರೀ ಬುರ್ಲಿ ಬಿಂದುಮಾಧವರು ಇದೇನು ಬೇಂದ್ರೆಯವರ ಚಿನ್ನಹಬ್ಬವಲ್ಲ. ಹೊಸ ಕರ್ನಾಟಕದ ಬೆಳ್ಳಿಯ ಹಬ್ಬ, ಈ ನವಕರ್ನಾಟಕದ ನಿರ್ಮಾಣಕ್ಕಾಗಿ ದುಡಿದ ನಿಃಸ್ವಾರ್ಥ ಕಾರ್ಯಕರ್ತರಲ್ಲಿ ಬೇಂದ್ರೆಯವರು ಒಬ್ಬರು. ಅವರ ಗೆಳೆಯರ ಗುಂಪಿನ ಅಂದಿನ ಸಖ್ಯಯೋಗ ಇಂದಿಲ್ಲ ಇನ್ನೆಂದಾದರೂ ಫಲಿಸುವದು ಎಂದರು. ಜಮಖಂಡಿ ಶ್ರೀಮತಿ ಕಮಲಾಬಾಯಿಯವರು ಬೇಂದ್ರೆಯವರ ಕವನಗಳನ್ನು ಗಾನದೋಸೆಗಳಲ್ಲಿ ಹಿಡಿದಿಡಲಪೇಕ್ಷಿಸಿದರು. ಶಬ್ದಮಾಧುರ್ಯದಲ್ಲಿ ಬೇಂದ್ರೆಯವರಿಗೆ ಸಮಾನರಿಲ್ಲವೆಂದು ಕು. ವೈದೇಹಿ ಡಂಬಳರ ಪ್ರಾಮಾಣಿಕ ಅಭಿಪ್ರಾಯವಾಗಿದ್ದರೆ, ಕವಿವರನ ವಾಸ್ತವಿಕತೆ, ಸೂಕ್ಷ್ಮಾನುಭವಗಳಿಂದ ಈ ಕೀರ್ತಿ ಅವರಿಗುಂಟಾಗಿದೆಯೆಂದು ಭೀಮಸೇನ ಸಾಸನೂರು ಹೇಳಿದ.



### ಎಲ್ಲವೂ ತಾಯಿಗೆ

ಕವಿವರರು ಉತ್ತರಿಸಲೆದ್ದು ನಿಂತರು. ಅದೇನು ಮಿಂಚಿನ ಮಾತೊ ಅವರದು

ಸತ್ಕಾರ ನನಗಲ್ಲ! ನನ್ನನ್ನು ಕವಿಯಾಗಿಸಿದ ಆ ನನ್ನ ತಾಯಿಗೆ. ನನ್ನ ತಾಯಿಯು ಕಡುಬಡತನದಿಂದ ನೊಂದ ಮನಸ್ಸಿನಲ್ಲಿ ಕಾವ್ಯ ಮೂಡಿತು ಅದಕ್ಕೆಂದೇ ‘ಅಂಬಿಕಾತನಯ ದತ್ತ’ನೆಂಬ ಮುದ್ರಿಕೆ ಸ್ವೀಕರಿಸಿವೆ ಇದು ಕೆಲವರಿಗೆ ರುಚಿಸಲಿಲ್ಲ. ಆದರೆ ತಾಯಿಯನ್ನು ನೆನೆಯುದವನೇನು ಮಾನವನೆ? ದೇವರಿಲ್ಲದ ಗುಡಿಗೆ ನಮಸ್ಕರಿಸುವದು ಪಾಪ. ನನ್ನ ದೇಹದ ದೇಗುಲದಲ್ಲಿ ನನ್ನ ತಾಯಿಯನ್ನಿಟ್ಟುಕೊಂಡಿರುವದರಿಂದ ನೀವು ಸತ್ಕಾರ ನಡೆಸುತ್ತಿದ್ದೀರಿ.

ತಾಯಿಯನ್ನು ಗೌರವಿಸುವ ಈ ಹೊಸ ಸಂಪ್ರದಾಯ ಬರಬೇಕಾಗಿದೆ. ಭೂಮಿತಾಯಿಯ ಬಗ್ಗೆಯೂ ಅಷ್ಟೆ. ಹೆಣ್ಣು ನಿಟ್ಟುಸಿರಿಡುವ ನಾಡು ಸುಟ್ಟುಹೋಗುವದು. ಹೆಣ್ಣಿಗೆ ಸಂತಾಪವಾಗದಂತೆ ನೋಡಿಕೊಳ್ಳಬೇಕು. ಜಗತ್ತಿನ ಈ ದುಃಖವನ್ನು ಕಂಡು ಅದರ ಉದ್ಧಾರಕ್ಕಾಗಿ ನನ್ನ ಗುರು ಅರವಿಂದರು ಹೆಣಗುತ್ತಿದ್ದಾರೆ. ನಾನು ಕಾಲೇಜದಲ್ಲಿದ್ದಾಗ ಅವರ ‘ಆರ್ಯ’ ಪತ್ರಿಕೆಯ ಸಂಚಿಕೆಗಳನ್ನು ಅರ್ಥವರಿಯದೆ ಓದಿದೆ. ಉತ್ತುತ್ತಿ ಕದ್ದು ತಿಂದರೆ ಶಕ್ತಿ ಬರದಿರುವದೆ? ಶ್ರೀ ಅರವಿಂದರ ಜ್ಞಾನಕಣ ನನ್ನಲ್ಲಿ ಇಳಿಯಿತು. ವ್ಯಕ್ತಿಗಳ ಚಿಕ್ಕಪುಟ್ಟ ದುರ್ಗುಣಗಳೆ ದುಃಖದ ಮೂಲ ಎಂದು ಹೊಳೆಯಿತು. ಹಾಗೆ ರಾಷ್ಟ್ರದ ದುರ್ಗುಣಗಳಿಂದ ಜಗತ್ತಿಗೆ ಕೇಡು. ವ್ಯಕ್ತಿಯ ಸಮಸ್ಯೆ ರಾಷ್ಟ್ರದ ಸಮಸ್ಯೆ ಎಂದರೆ ಅರ್ಥವಾಗಲಿಕ್ಕಿಲ್ಲ. ಆದರೆ ಕುಸ್ತಿ ಹಿಡಿದ ಈ ರಾಷ್ಟ್ರಗಳು ನೋಡುತ್ತ ನಿಂತಿರುವವರ ಮೇಲೆ ಬಂದು ಬೀಳುತ್ತವೆ. ಆದ್ದರಿಂದ ಇವರನ್ನು ತಡೆಯಬೇಕು. ಅದಕ್ಕೆ ಮೊದಲು ನಾವು ಗಟ್ಟಿಗರಾಗಬೇಕು. ನಾನೊಂದು ಯುದ್ಧಪೂರ್ವ ಸೂಚನೆ ಮಾಡುವೆ. ಯುದ್ಧ ಮಾಡಬಯಸುವ ರಾಷ್ಟ್ರಗಳಿಗೆ ನಾವೇ ಮದ್ದುಗುಂಡುಗಳನ್ನು ಬೇಕಾದಷ್ಟು ಕೊಟ್ಟು ಕ್ರಿಕೆಟಪಂದ್ಯಾಟದಂತೆ ಅವರಿಗೆ ಸಾಕಾಗುವವರೆಗೆ ಯುದ್ಧ ಮಾಡಲು ಇಂಬು ಮಾಡಿಕೊಡೋಣ. ನಂತರ ಉಪಹಾರದ ಸಮಯಕ್ಕೆ ನಾವೂ ಸೇರೋಣ ಎಂದು ಹೇಳಿದರೆ ನಿಮಗೆ ಸುಲಭವಾಗಿ ತಿಳಿದೀತು. ಇದು ಹಾಸ್ಯದ ರೀತಿ. ಇದರ ಹಿಂದಿನ ಅಣಕ ನಿಮಗೆ ಗೊತ್ತಿದೆ: ನನ್ನ ರೀತಿಯೂ ಈ ಹಾಸ್ಯರೀತಿ.

ಜೀವನವೇ ಕಾವ್ಯವೆಂದರು ಒಬ್ಬರು. ಹೆರವರ ದುಃಖ ತನ್ನದೆನ್ನುವ ವರೆಗೆ ಕಾವ್ಯವಿಲ್ಲ ಕಣ್ಣಿನಿಂದ ನೀರಿನಂಥದೇನನ್ನೊ ತೆಗೆತ್ತಿದಾರೆಂದು ಹೇಳುವಷ್ಟು ನಾವು ವಿಜ್ಞಾನಿಗಳಾದರೆ ಜ್ಞಾನ ಬೆಳೆದು ವೈರಾಗಿಗಳಾಗಿ ಹೋಗಬೇಕಾದೀತು. ಹೆರವರ ದುಃಖ ತನ್ನ ದುಃಖ, ಸುಖದಲ್ಲಿ ತನನನ ಬರುವದೇನೂ ದೊಡ್ಡ ಮಾತಲ್ಲ. ಸಖ್ಯಯೋಗ ಫಲಿಸಲಿಲ್ಲ ಎಂದರು ಇನ್ನೊಬ್ಬರು ಆದರೆ “ಲೀಲೆಯಲಿ ಯಾವದೂ ವಿಫಲವಲ್ಲ” ಅರಿತೊ ಅರಿಯದೆಯೋ ಬಿತ್ತಿದ ಬೀಜ ಫಲಿಸದೆ ಬಿಡದು ಅವರ ಸಂಯುಕ್ತ-ಕರ್ನಾಟಕದ ಕನಸು ಫಲಿಸಲೆಂದು ಹಾರೈಸುತ್ತೇನೆ.

ಸಹಸ್ರ ಹಸ್ತಗಳು ಈ ಕಾರ್ಯಕ್ಕಾಗಿ ದುಡಿಯುತ್ತಿವೆ. ಈ ಸತ್ಕರ ನನಗಲ್ಲ. ನಿಮ್ಮಲ್ಲಿ ಮೂಡಿಬಂದಿರುವ ಗುಣಗ್ರಾಹಕ ಶಕ್ತಿಗೆ, ಎಂದಂದುಕೊಳ್ಳುತ್ತೇನೆ. ಈ ಗುಣಗ್ರಹಣ ಶಕ್ತಿ ನಿತ್ಯವೂ ಕಾಣಿಸಿಕೊಳ್ಳುತ್ತಿರಲಿ.

### ಮುದಿಸಿಂಹನ ಗುಡುಗು

ಮಾತು ನಿಂತಿತು. ಮನಸ್ಸು ಆ ಲೋಕದಿಂದ ಹಿಂತಿರುಗಲಿಲ್ಲ. ಅಷ್ಟರಲ್ಲಿ ಕೇಳಿಸಿತು ಮುದಿಸಿಂಹದ ಗುಡುಗು.

ಶಿವಮೊಗ್ಗೆಯ ಅಧ್ಯಕ್ಷ ಬೇಂದ್ರೆನನ್ನು ಆಶೀರ್ವದಿಸಲು ಹೋಗಲಿಚ್ಛಿಸಿದ್ದೆ ಆದರೆ ಅತ್ಯವಸ್ಥೆಯಲ್ಲಿದ್ದೆ. ಭಗವಂತನ ಅನುಗ್ರಹದಿಂದ ಇಂದಿನ ಈ ಸಮಾರಂಭಕ್ಕೆ ಅಧ್ಯಕ್ಷನಾಗಿ ಆಶೀರ್ವದಿಸಲು ಅವಕಾಶ ದೊರೆತಿದೆ. ಇವನ ಕವನ ಕೇಳಬರದ ಹಳ್ಳಿಯೇ ಇಲ್ಲ ಕರ್ನಾಟಕದಲ್ಲಿ. ನಮ್ಮಲ್ಲಿ ಹಳ್ಳಿಗೊಬ್ಬ ಕವಿಯಿದ್ದಾನೆ. ಜೈಮಿನಿಯನ್ನು ಲಾವಣಿಯಲ್ಲಿ ಹೆಣೆದವರಿದ್ದಾರೆ ಎಂದು ಹೇಳಿ ಮುದವೀಡರು ಆ ಲಾವಣಿಯ ಚರಣವೊಂದನ್ನು ಅಂದುತೋರಿಸಿದರು. ಅಬ್ಬಾ ಆವೇಶವೆ!

ನನ್ನ ಜೀವನದ ೭೫ ವರ್ಷಗಳಲ್ಲಿ ಇಂಥ ಉತ್ಸವ ಕೆಲವೇ ಆಗಿವೆ. ಅನೇಕ ಉತ್ಸವಗಳು ನಡೆಯಬೇಕು. ಅನೇಕ ಕವಿಗಳಿಗೆ ಸನ್ಮಾನ ನಡೆಯಬೇಕು. ಸ್ವತಂತ್ರ ಭಾರತದಲ್ಲಿ ಸ್ವಾಯತ್ತ ಸಂಯುಕ್ತ ಕರ್ನಾಟಕವನ್ನು ಇದೇ ದೇಹದಲ್ಲಿ ಇದೇ ಕಣ್ಣುಗಳಿಂದ ನೋಡುವದಕ್ಕಾಗಿ ಭಗವಂತನು ನನ್ನನ್ನು ಬದುಕಿಸಿರುವನು ಎಂದು ಹೇಳಿದರು.

ನಂತರ ಬೇಂದ್ರೆಯವರು ‘ಧಾರವಾಡದ ತಾಯಿ’ ಕವನ ಹಾಡಿದರು. ಅನೇಕರು ಧ್ವನಿಯಂತ್ರದೆದುರು ಬಂದರೂ ‘ಅರಿಯಲಿಯಾ ನಮ್ಮನ್ನು’ ‘ ಬೆಳದಿಂಗಳಾ ನೋಡ ’ ಎಂಬೆರಡು ಕವನಗಳು ಇಂಪಾಗಿ ಕೇಳಿಸಿದವು. ಕೊನೆಗೆ ಕವಿವರರು ‘ ಹೂತ ದ ಕುಣಸಿಯಾ ಚಿಗರು ’ ಎಂದು ಹಾಡಿ ಎಲ್ಲರ ಬಾಯಲ್ಲಿ ನೀರೂರಿಸಿದರು.

ರಾಷ್ಟ್ರಗೀತೆ ಪ್ರಾರಂಭವಾದ ಕೂಡಲೆ ಚಟಪಟನೆ ಎದ್ದು ಗಡಿಯಾರ ನೋಡಿದೆ ೯॥ ಗಂಟೆಯಾಗಿತ್ತು. ೪॥ ಗಂಟೆಗಳು ನಾಲ್ಕು ನಿಮಿಷಗಳಂತೆ ತೋಚಿದವು.

“ ಒಂದೆ ಕರ್ನಾಟಕ ಒಂದೆ ”!

—“ ಪ್ರೇಕ್ಷಕ “

---



---

## ಕಾವ್ಯ ತರಂಗಿಣಿ

### ವಸಂತ

ಬಂದೆಯಾ ಬನದ ಸಿರಿಯೆ

ಎಂದಿನಿಂದಲಿ ಕರೆದು
ಬೆಂದು ಬಿಸುಸುಯ್ದಿರಲು
ನೊಂದ ಮನಗಳಿಗಾನಂದ ನೀಡುತೆ ನೀನು
ಬಂದೆಯಾ ಬನದ ಸಿರಿಯೆ!

ಕಳೆದ ಸಿರಿ ಕೂಡಿಸುತೆ
ಅಳಿದ ಸೊಬಗನು ಕೊಟ್ಟು
ಮಂದ ಹಾಸದ ಚೆಲುವು
ತುಂಬಿ ಎಲೆಹೂಗಳಲಿ
ಬಂದೆಯಾ ಬನದ ಸಿರಿಯೆ!

ಇಂದು ಕೇಳುತಲಿಹವು
ಉಲಿವ ಕೋಗಿಲಗಾನ
ಸಮರಸವು ಹೃದಯದಿ ಬೆರೆತು
ಮನವ ಹಿಗ್ಗಿಸುತಿಹುದು
ಬಂದೆಯಾ ಬನದ ಸಿರಿಯೆ!

ಹೂಗಳಾ ಕಾಂತಿಯು
ಮುಗಿಲು ಮುಟ್ಟುತಲಿರಲು
ಹಸಿರುಭೂಮಿಯ ತೆರೆಯು
ಹರಿವಂತೆ ಕಾಣಿಸುತ
ಬಂದೆಯಾ ಬನದ ಸಿರಿಯೆ!

— ಸೊರಟೂರ ರಾಮಚಂದ್ರ

* * *

### “ ಶಿಕ್ಷಕರ ಗೋಳು ! ”

ಬಂತೈ! ಬಂತೈ! ಬರಗಾಲ !
ತಂತೈ ! ಶಿಕ್ಷಕಗಳಿಗಾಲ !!
ಶಿಕ್ಷಕ ದೇವ !
ಬೋರ್ಡಿನ ಕೂಡ
ಸಂಬಳಕೋಸುಗ ಜಗಳಾಟ !
ಹುಟ್ಟಿಯ ಭತ್ತೆಗೆ ಪೇಚಾಟ !!

೨

ಬೇಸರ! ಬೇಸರ! ಬೇಸರಿಕೆ!
ಶಿಕ್ಷಕಗಾಗದು ಕಲಿಸುವಿಕೆ !!
ಕಾಳಿನ ಬೆಲೆಯು
ನಾಲ್ಮಡಿ ಏರಿ
ಜೀವನ ರಥವೇ ಸಾಗದಿದೆ !
ಬಾಳುವ ಬಗೆಯೇ ತೋರದಿದೆ !!

೩

ಹೇಸಿಕೆ! ಹೇಸಿಕೆ! ಹೇಸಿಕೆಯು !
ವೇತನ ಪೇಳ್ವರೆ ನಾಚಿಕೆಯು !!
ವಾರದ ಸಂತೆ
ತಂದಿತು ಚಿಂತೆ
ಸಂಪದವಿಲ್ಲದ ಶಿಕ್ಷಕಗೆ !
ಭಾವೀ ರಾಷ್ಟ್ರದ ಶಿಕ್ಷಕಗೆ !!

೪

ಶಿಕ್ಷಕಗಾಗಿದೆ ಬಂಧನವು !
ಸೆರೆಮನೆಯಾಗಿವೆ ಭಾರತವು !!
ಬಾವಿಗೆ ಹೋಗಿ
ಜೀವವ ನೀಗಿ
ಸತ್ತಿಹರಲ್ಲವ ಶಿಕ್ಷಕರು ?
ಕಣ್ಣನು ತೆರವರೆ ರಕ್ಷಕರು ?

೫

ದುಹೇರಿಯಾಳಿಕೆ ಶುರುವಾಯ್ತು !
ಬೋರ್ಡಿಗೆ ಕಾಂಚಣ ಸಿಗದಾಯ್ತು !!
ಪೇದೆಗು ಕಡಿಮೆ
ವೇತನ ಮಾಡಿ
ಶಿಕ್ಷಕವೃತ್ತಿಗೆ ಅಪಮಾನ !
ಭಿಕ್ಷುಕವೃತ್ತಿಗೆ ಸನ್ಮಾನ !!

೬

ಶಿಕ್ಷಣಖಾತೆಯ ದರಬಾರ!
ಬೋರ್ಡಿಗೆ ಕೊಟ್ಟಿತು ಸರಕಾರ !!
ವೇತನ ಬೆಳೆಸಿ
ಸಂಪಿಗೆ ಬಿಡದೆ
ಶಿಕ್ಷಕ ಹೋರೆಯ ಕಾಯುವದು!
ಸರಕಾರಕೆ ಹೊಣೆ ತಪ್ಪದಿದು !!

—ವೆಂಕಟರಮಣ ತೊರ್ಕೆ
( ಸಿದ್ದಾಪುರ )

## ಕವಿವರ್ಯ ಬೇಂದ್ರೆ

ಕವಿವರ್ಯ ಬೇಂದ್ರೆಯವರ ೫೦ ನೆಯ ಜನ್ಮ ದಿನೋತ್ಸವವು ಕನ್ನಡ ನಾಡಿನ ಎಲ್ಲ ಸ್ಥಳಗಳಲ್ಲಿ ವಿಶೇಷತಃ ಅವರ ಕವಿತಾ ಶಕ್ತಿಗೆ ಸ್ಫೂರ್ತಿ ಕೊಟ್ಟಿರುವ ಧಾರವಾಡ ನಗರದಲ್ಲಿ ಕಳೆದ ರವಿವಾರ ಒಳ್ಳೆ ವೈಭವದಿಂದ ಆಚರಿಸಲ್ಪಟ್ಟಿತು. ಕನ್ನಡ ಕವಿಗಳು ತಮ್ಮ ಜೀವಮಾನದಲ್ಲಿ ಹೀಗೆ ಸನ್ಮಾನ ಹೊಂದಿದುದು ಇದೇ ಮೊದಲನೆಯದೆಂದು ನಮಗೆ ನೆನಪಿನ ಮಟ್ಟಿಗೆ ತೋರುತ್ತದೆ. ಇಂಥ ಅಪೂರ್ವ ಗೌರವ ಪಡೆದ ಶ್ರೀಮಾನ್ ಬೇಂದ್ರೆಯವರ ಯೋಗ್ಯತೆಯನ್ನು ವರ್ಣಿಸುವದಕ್ಕೆ ಅವರಷ್ಟೇ ಫಲಪ್ರದವಾದ ಕಲ್ಪನೆಯಿದ್ದ ಕವಿಗೇ ಸಾಧ್ಯವಲ್ಲದೆ ಉಳಿದವರಿಂದಾಗದು. ಶ್ರೀ ಬೇಂದ್ರೆಯವರ ಕವನ ಕೆಲವು ಸುಖಜೀವಿಗಳು ಸಂತೋಷಪಡುವ ಸಾಹಿತ್ಯವಲ್ಲ. ಅವರ ಕಾವ್ಯಝರಿ ಹೃದಯದಿಂದಲೇ ಹರಿದು ಬಂದಿರುವದರಿಂದ ಕಾವ್ಯದ ಮಧುರ ರಸ ಹಾಗೂ ಜೀವನದ ಕಟುಅನುಭವ ಇವೆರಡೂ ಸಮರಸವಾಗಿ ಹರಿದಿರುತ್ತವೆ. ಅವರ ಶೈಲಿ ಸಹ ಆ ಅನುಭವದ ರಸಕ್ಕೊಪ್ಪುವಂತಿದೆ. ಶ್ರೀಮಾನ್ ಬೇಂದ್ರೆಯವರು ಆಧುನಿಕ ಕಾವ್ಯ ಸಾಮ್ರಾಜ್ಯದಲ್ಲಿ ಕ್ರಾಂತಿಯನ್ನೆಸಗಿ ಕವಿ ಸ್ವಾತಂತ್ರ್ಯವನ್ನು ಸ್ಥಾಪಿಸಿದ್ದಾರೆ. ಕನ್ನಡ ಸರಸತಿಗೆ ಕಳೆದ ೨೫ ವರ್ಷಗಳಲ್ಲಿ ಅವರು ಸಲ್ಲಿಸಿದ ಸೇವೆ ಅಮೋಘವಾಗಿದೆಯೆಂದು ಹೇಳಲಡ್ಡಿಯಿಲ್ಲ. ಕನ್ನಡ ರಸಿಕವೃಂದವು ಅವರ ಕಾವ್ಯಪ್ರತಿಭೆಯನ್ನು ಒಪ್ಪಿದ್ದರೂ ಅವರಿಗೆ ತಕ್ಕ ಗೌರವ ಸಲ್ಲಿಸುವ ಸಂದರ್ಭ ಒದಗಿದ್ದಿಲ್ಲ. ಮೊನ್ನೆ ಜರುಗಿದ ೫೦ ನೆಯ ಜನ್ಮ ದಿನೋತ್ಸವವನ್ನು ಈ ಶುಭಕಾರ್ಯಕ್ಕೆ ಆಯ್ದುಕೊಂಡುದು ಅತ್ಯಂತ ಪ್ರಶಂಸನೀಯವಾಗಿದೆ. ಕವಿವರ್ಯರ ಕಾವ್ಯವಾಣಿ ಇನ್ನೂ ರಸ ಸೂಸಿ ಹರಿದು ಇಡೀ ಕನ್ನಡ ನಾಡನ್ನೇ ಕಾವ್ಯಮಯ ಮಾಡುವಂತೆ ಆ ದಯಾಘನನು ಅವರಿಗೆ ಆಯುರಾರೋಗ್ಯ ಕೊಟ್ಟು ಕರುಣಿಸಲೆಂದು ನಾವು ಹಾರೈಸುತ್ತೇವೆ.

## ಈ ಫಾರ್ಸು ಏತಕ್ಕೆ?

ಸಂರಕ್ಷಣ ಕಾಯಿದೆಯ ಆಳಿಕೆ ಮುಗಿಯುತ್ತ ಬಂದಂತೆ ಜಮಖಂಡಿ ದರ್ಬಾರದವರು ಅದರ ಪೂರ್ಣ ಲಾಭ ತೆಗೆದುಕೊಳ್ಳುವ ಹವ್ಯಾಸಕ್ಕೆ ಬಿದ್ದಿರುವರೋ ಏನೋ ನಮಗೆ ತಿಳಿಯದಾಗಿದೆ ಇಲ್ಲದಿದ್ದರೆ ಶ್ರೀಗಳಾದ ಎ. ವ್ಹಿ. ಸಾಬಡೆ, ಶಿವಾಜಿ ಗಂಗಾಧರ ಕುಲಕರ್ಣಿ ಮತ್ತು ಎಸ್. ಎಚ್. ಪಾಟೀಲ ಇವರ ಮೇಲೆ ಪೂರ್ವ ಪರವಾನಿಗೆ ಇಲ್ಲದೆ ಭಾಷಣ ಮಾಡಕೂಡದೆಂಬ 'ಅಜ್ಞೆ'ಯನ್ನು ಹೊರಡಿಸುತ್ತಿರಲಿಲ್ಲ. ಇವರ ಭಾಷಣಗಳಿಂದ ಕರಕಂದಾಯ ವಸೂಲಿಗೆ ಅಡ್ಡಿಯಾಗಬಹುದು, ಕಾಳಿನ ಕೊಡಕೊಳ್ಳುವದಕ್ಕೆ ಪ್ರತಿಬಂಧವಾಗಬಹುದು, ದರಬಾರದ ವಿರುದ್ಧ ಅಸಂತೋಷ ಹಬ್ಬಬಹುದು ಎಂದು ಮುಂತಾಗಿ ತಾರ್ಕಿಕ ಕಾರಣಗಳನ್ನು ಮುಂದೆ ಮಾಡಿ ಮೇಲಿನಂತೆ ಅಜ್ಞೆ ಹೊರಡಿಸಲಾಗಿದೆ. ಈ ಮೂವರು ಗೃಹಸ್ಥರು ಜಮಖಂಡಿ ಸಂಸ್ಥಾನದಲ್ಲಿ ಕಳೆದ ಹತ್ತಿಪ್ಪತ್ತು ವರ್ಷಗಳಿಂದ ಸಾರ್ವಜನಿಕ ಕಾರ್ಯ ಮಾಡುತ್ತ ಬಂದಿರುವರು. ಆದರೆ ದರಬಾರವು ಹೀಗೆ ಹೆದರುವಂಥ ಪ್ರಸಂಗ ವುಂಟಾಗಿದ್ದಿಲ್ಲ. ಶಾಂತ ಮತ್ತು ಅಹಿಂಸಾ ಮಾರ್ಗದಿಂದ ಕೆಲಸ ಮಾಡುತ್ತಿದ್ದ ಈ ಕಾರ್ಯಕರ್ತರ ಮನೋವೃತ್ತಿಯೇ ಈಗ ಕ್ರಾಂತಿಕಾರಕವಾಯಿತೋ ಅಥವಾ ದರ್ಬಾರದ ದೃಷ್ಟಿ ಬದಲಾಯಿತೋ ತಿಳಿಯದು ನಮ್ಮ ಅನುಭವದಿಂದ ಹೇಳುವದಾದರೆ ಎರಡನೆಯದೇ ಇದ್ದಿರಬಹುದು. ಮೇಲಾಗಿ ಈಗ ಆ ಸಂಸ್ಥಾನದಲ್ಲಿ ಪ್ರಜಾಪ್ರತಿನಿಧಿ ಸಭೆಯ ಚುನಾವಣೆಗಳನ್ನು ಹೂಡಲಾಗಿದೆ. ಶ್ರೀ ಸಾಬಡೆ ಮತ್ತು ಕುಲಕರ್ಣಿಯವರು ಹುರಿಯಾಳುಗಳಾಗಿರುತ್ತಾರೆ. ಅವರ ಮೇಲೆ ಇಂಥ ನಿರ್ಬಂಧದಾಜ್ಞೆ ಹೊರಡಿಸಿ ಚುನಾವಣೆಯ ಮತಪ್ರಚಾರಕ್ಕೆ ಆತಂಕ ಮಾಡುವದು ಸಂರಕ್ಷಣ ಕಾಯಿದೆಯ ದುರುಪಯೋಗವಲ್ಲದೆ ಮತ್ತೇನು? ಹುರಿಯಾಳುಗಳಿಗೆ ತಮ್ಮ ಉದ್ದೇಶ ತಿಳಿಸಿ ಹೇಳುವ ಭಾಷಣ ಸ್ವಾತಂತ್ರ್ಯ ಕೊಡದಿದ್ದರೆ ಚುನಾವಣೆಯ ಬದಲು ಅದರ ಫಾರ್ಸು ಮಾಡಿದಂತಾಗುವದೆಂದು ನಾವು ಸ್ಪಷ್ಟ ಹೇಳಬಯಸುತ್ತೇವೆ. ಈ ಸದ್ಗೃಹಸ್ಥರು ಅಪರಾಧವನ್ನೇನಾದರೂ ಮಾಡಿದ್ದರೆ ಅವರನ್ನು ಕೋರ್ಟಿಗೆ ಎಳೆಯಬಹುದಾಗಿತ್ತಲ್ಲವೆ? ಈ ವಾಮಮಾರ್ಗವೇಕೆ? ದರಬಾರದವರು ಈ ಅನ್ಯಾಯವನ್ನು ಈಗಲಾದರೂ ದೂರ ಮಾಡುವರೆಂದು ನಾವು ಆಶಿಸುತ್ತೇವೆ.

# ಸಂಪಾದಕೀಯ

# ಟೀಕೆ-ಟಿಪ್ಪಣೆಗಳು

## ಶಿಕ್ಷಕರ ಸಂಪು

ಪ್ರಾಣಿ, ಎಷ್ಟೇ ಸಾಧುವಿದ್ದರೂ ಅದರ ಸಹನೆಗೆ ಸಹ ಒಂದು ಮಿತಿ ಇರುವದು. ಆ ಮಿತಿ ಮೀರಿದ ಮೇಲೆ ಅದು ಸಹ ಉದ್ವಿಗ್ನಗೊಳ್ಳುತ್ತದೆ. ಈ ದೇಶದ ಪ್ರಾಥಮಿಕ ಶಾಲಾ ಶಿಕ್ಷಕರ ಪರಿಸ್ಥಿತಿ ಇದೇ ರೀತಿಯದಾಗಿದೆ. ೧೯೩೪ ರಲ್ಲಿ ಪ್ರಾಥಮಿಕ ಶಿಕ್ಷಣವು ಜಿಲ್ಲಾ ಲೋಕಲ್ ಬೋರ್ಡುಗಳಿಗೆ ಒಪ್ಪಿಸಲ್ಪಡುವ ವರೆಗೆ ಶಿಕ್ಷಕರಿಗೆ ಶಿಕ್ಷಣವೂ ಚೆನ್ನಾಗಿ ದೊರೆಯುತ್ತಿತ್ತು ಮತ್ತು ಸಂಬಳವೂ ಸಾಕಷ್ಟು ದೊರೆಯುತಿತ್ತು. ಅನಂತರದಿಂದ ಇವೆರಡೂ ಇಳಿಯುತ್ತಿಳಿಯುತ್ತ ೧೯೩೭ ರ ಹೊತ್ತಿಗೆ ಕನಿಷ್ಟ ಮಟ್ಟಕ್ಕೆ ಬಂದು ನಿಂತಿದ್ದವು. ೧ ವರ್ಷ ಟ್ರೇನಿಂಗ ಮತ್ತು ೧೫ ರಿಂದ ೪೦ ರೂ. ಸಂಬಳ ಇವು ಸ್ಥಿರವಾದವು ಮುಂದೆ ಕಾಂಗ್ರೆಸ ಮಂತ್ರಿಮಂಡಲದ ಕಾಲದಲ್ಲಿ ಶಿಕ್ಷಣ ಮಟ್ಟವು ಏರಿತಾದರೂ ಸಂಬಳ ಮಾತ್ರ ಅಲ್ಲಿಗೇ ನಿಂತಿತು. ಅದರ ವಿಚಾರ ಸಹ ಆಗುವದಿತ್ತು. ಅಷ್ಟರಲ್ಲಿ ಕಾಂಗ್ರೆಸ ಮಂತ್ರಿಮಂಡಲವು ಅಧಿಕಾರದಿಂದ ಹೊರಬಿದ್ದಿತು ಮತ್ತು ಶಿಕ್ಷಕರು ಅದೇ ಅಲ್ಪ ವೇತನದಲ್ಲಿ ಕೊಳೆಯಬೇಕಾಯಿತು. ಆದರೂ ಆಕಳದಂಥ ಸರಲ ವೃತ್ತಿಯ ಶಿಕ್ಷಕರು ಅದನ್ನು ತಡೆದುಕೊಂಡರು. ಯುದ್ಧದ ಬೇಗೆ ನಡುವೆ ಬರದಿದ್ದರೆ ಇಲ್ಲಿಯ ವರೆಗೂ ತಡೆದುಕೊಳ್ಳುತ್ತಿದ್ದರೆಂಬಲ್ಲಿ ಸಂಶಯವಿಲ್ಲ. ಯುದ್ಧವು ಅವರ ಹೊಟ್ಟೆಗೇ ಕಾಲು ಕೊಟ್ಟದ್ದರಿಂದ ಸಹನೆ ಮೀರಿ ಈಗ ಸಂಪು ಹೂಡುವ ನಿರ್ಧಾರ ಮಾಡಿರುವರು. ಅದು ಮಾರ್ಚ ೧ ರಿಂದ ಪ್ರಾರಂಭವಾಗುವದಿದ್ದು ಅದರ ಪೂರ್ವಭಾವಿಯಾಗಿ ಮೊನ್ನೆ ದಿನಾಂಕ ೨೦ ಕ್ಕೆ ಶಿಕ್ಷಕ ದಿನವು ಇಡೀ ಪ್ರಾಂತದಲ್ಲಿ ಆಚರಿಸಲ್ಪಟ್ಟಿತು. ಶಿಕ್ಷಕರ ಪರಿಸ್ಥಿತಿ ಇಷ್ಟು ನಿಕೃಷ್ಟಾವಸ್ಥೆಗೆ ಮುಟ್ಟಿ ಸಂಪು ಹೂಡುವ ನಿರ್ಧಾರಕ್ಕೆ ಬರುವ ವರೆಗೆ ಸರಕಾರವು ಸುಮ್ಮನೇ ಕುಳಿತಿದ್ದು ಶೋಚನೀಯವಾಗಿದೆ. ರೂ ೪೦ ರಿಂದ ಪ್ರಾರಂಭಿಸಿ ೮೦ ರ ವರೆಗೆ ಸಂಬಳ ಕೊಡಬೇಕೆಂದು ಸಾಠೆ-ಪರಾಂಜಪೆ ಸಮಿತಿಯವರು ಅಭಿಪ್ರಾಯ ಪಟ್ಟಿದ್ದರು. ಆದರೆ ೪೦ ರೂ. ಪ್ರಾರಂಭದ ಸಂಬಳವಾಗುವ ಬದಲು ಅಂತಿಮ ಸಂಬಳವಾಗಿದೆ. ಹೇಗಿದೆ ಪ್ರಗತಿ! ಶಿಕ್ಷಕರ ಬೇಡಿಕೆಗಳು ಅತ್ಯಂತ ನ್ಯಾಯವಾಗಿದ್ದು ಅವುಗಳನ್ನು ಮನ್ನಿಸುವದು ಸರಕಾರದ ಕರ್ತವ್ಯವಾಗಿದೆ. ಸ್ಥಾನಿಕ ಸಂಸ್ಥೆಗಳ ಮೇಲೆ ಹೊಣೆ ಹಾಕಿ ಪಾರಾಗುವದು ಸಾಧ್ಯವಿಲ್ಲ. ಆದುದರಿಂದ ಸಂಪು ಪ್ರಾರಂಭವಾಗುವ ಮೊದಲೇ ಅದನ್ನು ತಪ್ಪಿಸುವ ಉಪಾಯ ಕೈಕೊಳ್ಳಬೇಕೆಂದು ನಾವು ಒತ್ತಿ ಹೇಳದಿರಲಾರೆವು.

## ಸಹಕಾರ ಭಿಕ್ಷೆ

ಆಹಾರ ಪರಿಸ್ಥಿತಿ ಹದಗೆಟ್ಟು ಅಧಿಕಾರಿಗಳಿಗೆ ದಿಗ್ಭ್ರಮಣೆಯಾದುದರಿಂದ ಲಾರ್ಡ ವೇವೆಲ್ಲರನ್ನು ಮೊದಲ್ಗೊಂಡು ಎಲ್ಲರೂ ಸಹಕಾರ ಬಿಕ್ಷೆ ಕೇಳುತ್ತಿರುವರು. ಲಾರ್ಡ ವೇವೆಲ್ಲರು ಕಳೆದ ಶನಿವಾರ ಆಕಾಶವಾಣಿ ಭಾಷಣ ಮಾಡಿ ಸೀದಾ ಕತ್ತರಿಸುವ ನಿರ್ಧಾರವನ್ನು ತಿಳಿಸಿ ಜನತೆಯ ಸಹಕಾರ ಕೋರಿದರು. ಸುದ್ದಿ ಖಾತೆಯ ಮಂತ್ರಿ ಸರ್ ಅಬಕರ ಹೈದರಿ ಮತ್ತು ಆಹಾರ ಖಾತೆಯ ಕಾರ್ಯದರ್ಶಿ ಶ್ರೀ ಬಿ. ಆರ್. ಸೇನರು ಅಲ್ಲಾಬಾದಕ್ಕೆ ತ್ವರಿತದಿಂದ ಓಡಿಹೋಗಿ ಅಖಿಲ ಭಾರತದ ಸಂಪಾದಕರೆದುರು ತಮ್ಮ ದುಃಖವನ್ನು ತೋಡಿಕೊಂಡರು. ಇವರ ಭಾಷಣಗಳಲ್ಲಿ ಇನ್ನೂ ಒಂದು ಹೊಸ ವಿಷಯವಿದೆ. ಆಹಾರ ದಮುಸ್ಯೆಗೆ ರಾಜಕೀಯ ಬಣ್ಣ ಕೊಡಬಾರದೆಂಬುದೇ ಇದು. ಸಮಯಾಸಮಯ ನೋಡದೇ ಇದನ್ನು ಮೇಲಿಂದ ಮೇಲೆ ಏಕೆ ಪುನರುಚ್ಚರಿಸುತ್ತಿರುವರೋ ನಾವು ಕಾಣೆವು. ಆಹಾರ ಪರಿಸ್ಥಿತಿಯ ನಿವಾರಣೆಯಾಗಬೇಕಾದರೆ ಕೇಂದ್ರದಲ್ಲಿ ರಾಷ್ಟ್ರೀಯ ಸರಕಾರ ಸ್ಥಾಪಿಸುವದು ಅತ್ಯಗತ್ಯವಿದೆಯೆಂದು ಮಹಾತ್ಮಾ ಗಾಂಧಿಯವರು ಕೇಳಿದುದಕ್ಕೆ ಇದು ಉತ್ತರವಿದ್ದಂತೆ ತೋರುತ್ತದೆ. ರಾಷ್ಟ್ರೀಯರ ಸೂಚನೆಗಳಿಗೆಲ್ಲ ರಾಜಕೀಯ ಬಣ್ಣ ಕೊಡುವದು ಈಗಿನ ಅಧಿಕಾರಿ ವರ್ಗದ ರೂಢಿಯಾಗಿ ಬಿಟ್ಟಿದೆ. ಕಾಂಗ್ರೆಸದ ಪರವಾಗಿ ಯಾವದೇ ಸೂಚನೆ ಬಂದರೂ ಬ್ರಿಟಿಶ್ ಅಧಿಕಾರಿಗಳು ಅದನ್ನು ಅದೇ ದೃಷ್ಟಿಯಿಂದ ನೋಡುತ್ತಾರೆ. ಇಂದಿನ ಆಹಾರ ದುಸ್ಥಿತಿಗೆ ಈಗಿನ ಮಂತ್ರಿಗಳೇ ಕಾರಣರು. ರಾಷ್ಟ್ರವನ್ನು ಬರಗಾಲದಿಂದ ತಪ್ಪಿಸುವ ಮುಂದಾಲೋಚನೆ ಇಲ್ಲ. ತತ್ಪರಿಣಾಮವಾಗಿ ಬಂಗಾಲವು ೩೦ ಲಕ್ಷ ಪ್ರಾಣಗಳನ್ನು ಕಳೆದುಕೊಳ್ಳಬೇಕಾಯಿತು. ಬರಗಾಲ ಸಮಿತಿಯವರು ಸೂಚಿಸಿದಂತೆ ೫ ಲಕ್ಷ ಟನ್ ಆಹಾರ ಸಂಗ್ರಹವನ್ನೇಕೆ ಮಾಡಲಿಲ್ಲವೆಂದು ಆಹಾರ ಮಂತ್ರಿಗಳಾದ ಸರ್ ಜ್ವಾಲಾಪ್ರಸಾದ ಶ್ರೀವಾಸ್ತವರನ್ನು ಕೇಳಿದಾಗ, ಹಾಗೆ ಕೂಡಿಟ್ಟದ್ದರೂ ಬರಗಾಲ ಪರಿಸ್ಥಿತಿಯಲ್ಲಿ ವಿಶೇಷ ಬದಲಾವಣೆಯಾಗುತಿದ್ದಿಲ್ಲದೆಂದು ಉತ್ತರವಿತ್ತರು. ಇವರ ದೃಷ್ಟಿಯಲ್ಲಿ ಆಹಾರಕ್ಕೆ ಎಷ್ಟು ಮಹತ್ವವಿದೆಯೆಂಬುದು ಇದರಿಂದ ವ್ಯಕ್ತವಾಗುತ್ತದೆ. ಪುನಃ ಇಂಥ ಅಯೋಗ್ಯರಲ್ಲಿ ವಿಶ್ವಾಸ ವಿಟ್ಟು ಸಹಕಾರ ನೀಡುವಂತೆ ಕೇಳಿಕೊಳ್ಳುವದು ಧಾರ್ಷ್ಟ್ಯದ ಮಾತಾಗುವದು. ಆದಾಗ್ಯೂ ಮಹಾತ್ಮಾ ಗಾಂಧಿಯವರು ತಮ್ಮಲ್ಲಿದ್ದ ಅನಂತ ಔದಾರ್ಯಕ್ಕನುಸರಿಸಿ ಹಾಗೂ ಬಡವರ ಬಗ್ಗೆ ಕಳಕಳಿಯಿಂದ ಸಹಕಾರ ನೀಡಲು ಒಪ್ಪಿದ್ದಾರೆ. ನಿರ್ವಂಚನೆಯಿಂದ ಅದರ ಉಪಯೋಗವನ್ನು ಅದೆಂತು ತಗೆದುಕೊಳ್ಳುವರೋ ನೋಡೋಣ.

## ಬ್ರಿಟಿಶ್ ಮಂತ್ರಿಗಳ ರಾಯಭಾರ

ಭಾರತಮಂತ್ರಿ ಲಾರ್ಡ ಪೆಥಿಕ್ ಲಾರೆನ್ಸ ವಾಣಿಜ್ಯ ಮಂತ್ರಿ ಸರ್ ಸ್ಟಾಫೋರ್ಡ ಕ್ರಿಪ್ಸ ಮತ್ತು ನೌಕಾ ಮಂತ್ರಿ ಎ. ವಿ. ಅಲೆಕ್ಝಾಂಡರ ಇವರ ರಾಯಭಾರ ಮಂಡಲವು ಹಿಂದೀ ಸಮಸ್ಯೆ ಬಿಡಿಸಲು ಇಲ್ಲಿಗೆ ಮಾರ್ಚ ತಿಂಗಳ ಉತ್ತರಾರ್ಧದಲ್ಲಿ ಈ ದೇಶಕ್ಕೆ ಬರುತಿರುವದು ಸಮಂಜಸ ಮತ್ತು ಸಮಯೋಚಿತವಾಗಿದೆಯೆಂದು ನಾವು ಹೇಳದಿರಲಾರೆವು. ಈ ಹೆಜ್ಜೆ ಕೈಕೊಳ್ಳುವಲ್ಲಿ ಬ್ರಿಟಿಶ್ ಸರಕಾರದವರು ಮುತ್ಸದ್ದಿತನ ತೋರಿಸಿದ್ದಾರೆ. ಬ್ರಿಟಿಶ್ ಮಂತ್ರಿಮಂಡಲದ ಇಂತಹ ಪ್ರಾತಿನಿಧಿಕಮಂಡಲವು ವಸಾಹತುಗಳಿಗೆ ಹೋಗುತ್ತಿರುವದು ಇದೇ ಮೊದಲನೆಯದೆಂದು ಕಾಣುತ್ತದೆ. ಸದುದ್ದೇಶ ಪ್ರೇರಿತರಾಗಿ ಅವರು ಈ ನಿರ್ಧಾರಕ್ಕೆ ಬಂದಿರುವರು. ಆದರೆ ಬರಿ ಸದುದ್ದೇಶವಿದ್ದರೆ ಕಾರ್ಯ ಸಾಧ್ಯವಾದೀತೆಂದು ನಮಗನಿಸುವದಿಲ್ಲ. ಸರ್ ಸ್ಟಾಫೋರ್ಡ ಕ್ರಿಪ್ಸರು ೧೯೪೨ ರಲ್ಲಿ ಇಲ್ಲಿಗೆ ಬರುವಾಗ ಎಲ್ಲರಿಗಿಂತಲೂ ಸದುದ್ದೇಶವುಳ್ಳವರಾಗಿದ್ದರು. ಮೇಲಾಗಿ ಅವರು ಹಿಂದುಸ್ಥಾನದ ಮಿತ್ರರಿದ್ದುದರಿಂದ ಇಲ್ಲಿಯ ರಾಜಕೀಯ ಸಮಸ್ಯೆ ಬಿಡಿಸದೆ ಹೋಗಲಾರರೆಂದು ನಂಬಲಾಗಿದ್ದಿತು. ಆದರೆ ಪರಿಣಾಮವೇನಾಯಿತೆಂಬದು ಎಲ್ಲರಿಗೂ ಗೊತ್ತೇ ಇದೆ. ಆದುದರಿಂದ ಸದುದ್ದೇಶದ ಜೊತೆಗೆ ದೃಢನಿರ್ಧಾರವೂ ಅವಶ್ಯವಿರುವದು. ಇವಲ್ಲದೆ ಇನ್ನೂ ಕೆಲವು ಸೂಚನೆಗಳನ್ನು ಮಾಡಬಹುದು. ಮೊದಲನೆಯದಾಗಿ ರಾಯಭಾರವು ಹಿಂದುಸ್ಥಾನಕ್ಕೆ ಬರುವ ಮೊದಲು ಕೇಂದ್ರದಲ್ಲಿ ರಾಷ್ಟ್ರೀಯ ಸರಕಾರ ಸ್ಥಾಪಿತವಾಗಬೇಕು. ಎರಡನೆಯದಾಗಿ, ಅಲ್ಪಸಂಖ್ಯಾಕರ ಹಟಮಾರಿತನವು ರಾಷ್ಟ್ರದ ಪ್ರಗತಿಯಲ್ಲಿ ಅಡ್ಡಗಲಾಗಿ ಪರಿಣಮಿಸದಂತೆ ಮುಂಜಾಗ್ರತೆ ವಹಿಸಬೇಕು. ಒಂದು ವೇಳೆ ಅಂಥ ಪ್ರಸಂಗ ಬಂದರೆ ಅದನ್ನು ತೊಡೆದು ಹಾಕಲೂ ಸಿದ್ಧರಾಗಬೇಕು. ಇಲ್ಲದಿದ್ದರೆ ಸಿಮ್ಲೆಯ ಪುನರಾವೃತ್ತಿಯಾಗುವದು. ಕೊನೆಯದಾಗಿ, ಕ್ರಿಪ್ಸ ಕೊಡುಗೆಯನ್ನು ಮರೆತುಬಿಡಬೇಕು. ಅದನ್ನೆ ಪುನಃ ಮುಂದೆ ಮಾಡುವದು ಸತ್ತ ಕುದುರೆಯನ್ನು ಬಡಿದೆಬ್ಬಿಸಿದಂತೆಯೇ ಸರಿ. ಆದುದರಿಂದ ಅದನು ಬಿಟ್ಟು ಹೊಸದಾಗಿ ಮಾತುಕತೆಗಳನ್ನು ಆರಂಭಿಸಿದರೆ ಫಲಪ್ರದವಾಗಬಹುದು.

## ರೇಲ್ವೆ ಮುಂಗಡ ಪತ್ರಿಕೆ

ಹಿಂದುಸ್ಥಾನದ ಸಾರಿಗೆ ಮಂತ್ರಿಗಳಾದ ಸರ್ ಎಡ್ವರ್ಡ ಬೆಂಥಾಲರು ೧೯೪೬-೪೭ ರ ರೇಲ್ವೆ ಮುಂಗಡ ಪತ್ರಿಕೆಯನ್ನು ಕೇಂದ್ರ ಶಾಸನಸಭೆಯಲ್ಲಿ ಮಂಡಿಸಿರುತ್ತಾರೆ. ಅದರ ವಿವರಗಳನ್ನು ಬೇರೆಡೆ ಕೊಟ್ಟಿದೆ. ಅದನ್ನು ಸೂಕ್ಷ್ಮವಾಗಿ ಓದಿ ನೋಡಿದರೆ, ಯುದ್ಧೋತ್ತರ ರೇಲ್ವೆಯ ಸೌಖ್ಯದ ಬಗ್ಗೆ ಕನಸು ಕಾಣುತ್ತಿರುವವರಿಗೆ ನಿರಾಶೆಯಾಗದಿರದು. ಯುದ್ಧದಲ್ಲಿ ರೇಲ್ವೆಗಳಿಂದ ಜನರಿಗೆ ಎಷ್ಟು ತೊಂದರೆಯಾಗಿರುವದೆಂಬದನ್ನು ವರ್ಣಿಸುವ ಅಗತ್ಯ ಉಳಿದಿಲ್ಲ. ಅದು ನಿತ್ಯದ ಅನುಭವ. ಆದರೆ ಯುದ್ಧೋತ್ತರದಲ್ಲಿಯಾದರೂ ಅದರಿಂದ ಸುಖವಾದೀತು, ಹಿಂದೀ ಔದ್ಯೋಗಿಕರಣಕ್ಕೆ ಸಹಾಯವಾದೀತು ಎಂದು ಮುಂತಾಗಿ ಹಾರೈಸಲಾಗಿದ್ದಿತು. ಆದರೆ ಮಾನ್ಯ ಮಂತ್ರಿಗಳು ಮೂರನೇ ಮತ್ತು ಇಂಟರ ವರ್ಗದ ಡಬ್ಬಿಗಳ ಸುಧಾರಣೆಯ ಹೊರತು ಯಾವ ಯೋಜನೆಯನ್ನೂ ಮಾಡದಿರುವದು ವಿಷಾದಕರವಾಗಿದೆ. ಯುದ್ಧದ ೬ ವರ್ಷಗಳಲ್ಲಿ ರೇಲ್ವೆಗಳಿಗೆ ೩೦೦ ಕೋಟಿ ರೂಪಾಯಿ ಲಾಭವಾಗಿದ್ದರೂ ೨೨ ಕೋಟಿ ರೂಪಾಯಿಗಳನ್ನು ೩೦೦೦ ಮೈಲು ಹೊಸ ರೇಲ್ವೆ ಹಾಕಲು ತಗೆದಿಟ್ಟಿರುವರು. ಮುಂದೆ ಸಿಗಬಹುದಾದ ಪ್ರವಾಸ ಸೌಕರ್ಯವನ್ನು ನೆನೆದು ಸುಖ ಕನಸು ಕಾಣಬೇಕೆಂದರೆ, ಮುಂದಿನ ವರ್ಷದಿಂದ ರೇಲ್ವೆ ದರ ಏರಿಸುವದು ಅನಿವಾರ್ಯವಾಗಬಹುದೆಂದು ಹೆದರಿಸಿ ಅದನ್ನು ಸಹಕರಗಿಸಿರುವರು. ಸರ್ ಬೆಂಥಾಲರಲ್ಲಿ ಯಾವ ತರದ ಧೈರ್ಯವಿರದಿರುವದು ಈ ಮುಂಗಡದ ದೊಡ್ಡ ದೋಷ. ಇನ್ನು ರೇಲ್ವೆಯ ಉತ್ಪನ್ನ ಕಡಿಮೆಯಾಗುತ್ತದೆ, ಕೆಲಸಗಾರರ ಬೇಡಿಕೆಗಳನ್ನು ಹೇಗೆ ಮನ್ನಿಸಬೇಕು ಮುಂತಾಗಿ ಕಣ್ಣೀರು ಹಾಕಿದ್ದಾರೆ. ಯುದ್ಧೋತ್ತರದಲ್ಲಿ ಮುಗ್ಗಟ್ಟಿನ ಪರಿಸ್ಥಿತಿ ಬರುವದು ನಿಶ್ಚಿತವಿದ್ದರೂ ಅದಕ್ಕೆ ತಕ್ಕ ಪೂರ್ವ ಸಿದ್ಧತೆ ಮಾಡದಿರುವದು ಅವರ ಅಯೋಗ್ಯತೆಯನ್ನೇ ತೋರ್ಪಡಿಸುತ್ತದೆ. ಉತ್ಪನ್ನ ಇಳಿಯದಂತೆ ರೇಲ್ವೆ ಚಟುವಟಿಕೆಗಳನ್ನು ವಿಸ್ತರಿಸಿ ಮತ್ತು ಔದ್ಯೋಗೀಕರಣ ಪ್ರೋತ್ಸಾಹಿಸಿ ಉಪಾಯ ಯೋಜಿಸಲು ಬರುತ್ತದೆ. ಆದರೆ ಸರ್ ಬೆಂಥಾಲರಂಥ ಅಧಿಕಾರರಿಗೆ ಇದು ಸಾಧ್ಯವಿಲ್ಲ. ಇದಕ್ಕೆ ರಾಷ್ಟ್ರೀಯ ಮನೋವೃತ್ತಿಯವರು ಬೇಕು, ರಾಷ್ಟ್ರೀಯ ಸರಕಾರ ಬೇಕು.

## ಸ್ಮಟ್ಸರ ವರ್ಣದ್ವೇಷ

ದಕ್ಷಿಣ ಆಫ್ರಿಕೆಯ ಮಹಾಪ್ರಧಾನರಾದ ಫೀಲ್ಡ ಮಾರ್ಶಲ್ ಜನರಲ್ ಸ್ಮಟ್ಸರ ವರ್ಣ ದ್ವೇಷಕ್ಕೆ ಮಿತಿ ಇಲ್ಲದಾಗಿದೆ. ಯುದ್ಧ ಕಾಲದಲ್ಲಿ ವರ್ಣದ್ವೇಷ ಹಬ್ಬಿಸುವ ಕಾಯಿದೆ ಮಾಡುವದಿಲ್ಲವೆಂದು ಆಶ್ವಾಸನ ಕೊಟ್ಟ ಅವರು ಅದನ್ನು ಆಗಲೇ ಮರೆತು ೧೯೪೩ ರಲ್ಲಿ ಪೆಗಿಂಗ ಕಾಯಿದೆ ಮಾಡಿದರು. ದರಬಾನ ನಗರದಲ್ಲಿ ಹಿಂದೀಯರು ಯಾವದೇ ರೀತಿಯಿಂದ ಆಸ್ತಿ ಸಂಪಾದಿಸತಕ್ಕದ್ದಲ್ಲವೆಂದು ಆದರನ್ವಯ ವಿಧಿಸಲಾಯಿತು. ಇದನ್ನು ಹಿಂದೀಯರು ಕಟುವಾಗಿ ವಿರೋಧಿಸಿದರು. ಹಿಂದುಸ್ಥಾನದ ಶಾಸನಸಭೆಯಲ್ಲಿ ಸಹ ಇದರ ಬಗೆ ದೀರ್ಘ ಚರ್ಚೆ ನಡೆದು, ದಕ್ಷಿಣ ಆಫ್ರಿಕೆಯ ಸರಕಾರವು ಹಟ ಬಿಡದಿದ್ದರೆ ಪ್ರತ್ಯಕಾರೋಪಾಯ ಕೈಕೊಳ್ಳಬೇಕೆಂದು ನಿರ್ಧರಿಸಿತು. ಆಗ ಫೀಲ್ಡ ಮಾರ್ಶಲ್ಲರಿಗೆ ಬುದ್ಧಿ ಬಂದು ಕೇಪಟೌನ ಒಪ್ಪಂದ ಮಾಡಿಕೊಂಡರು. ಅದರನ್ವಯ ಹಿಂದೀಯರು ದರಬಾನದಲ್ಲಿ ವ್ಯವಹಾರಕ್ಕಾಗಿ ಕಟ್ಟಡಗಳನ್ನು ಬಾಡಿಗೆಗೆ ತೆಗೆದುಕೊಳ್ಳಲು ಒಪ್ಪಲಾಯಿತು. ಈಗ ಈ ಕಾಯಿದೆಯ ಅವಧಿ ಮುಗಿಯುತ್ತ ಬಂದುದರಿಂದ ಅದನ್ನು ಸ್ಥಿರಗೊಳಿಸಲು ಯತ್ನಿಸುತ್ತಿರುವದಲ್ಲದೆ, ಫ್ರೀಜಿಂಗ ಬಿಲ್ ಎಂಬ ಹೊಸ ಮಸೂದೆಯನ್ನು ಪ್ರಕಟಿಸಿರುವರು. ದಕ್ಷಿಣ ಆಫ್ರಿಕೆಯಲ್ಲಿರುವ ಹಿಂದೀಯರು ಮತ್ತು ಇನ್ನಿತರ ಏಶಿಯಾ ನಿವಾಸಿಗಳ ನಡುವೆ ಆಸ್ತಿಯ ಖರೀದಿ-ಮಾರಾಟ ತಡೆಯುವದೇ ಇದರ ಉದ್ದೇಶ. ಇದು ವರ್ಣ ದ್ವೇಷದ ಅತಿರೇಕವಲ್ಲದೆ ಮತ್ತೇನು? ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ಸಿಕ್ಕುವ ವರೆಗೆ ವಿದೇಶದಲ್ಲಿ ನೆಲೆಸಿದ ಭಾರತೀಯರಿಗೆ ಮೋಕ್ಷವಿಲ್ಲ.

# ೩ನೆ ವರ್ಗದ ಪ್ರಯಾಣಿಕರಿಗೆ ಹೆಚ್ಚಿನ ಸೌಕರ್ಯ

## ಶಾಸನ ಸಭೆಯಲ್ಲಿ ೧೯೪೬-೪೭ರ ಮುಂಗಡ ಪತ್ರ— ರೇಲ-ರಸ್ತೆ ಸಂಯೋಜನೆ ತಡೆಯಬೇಕೆಂದು ಉಪಸಮಿತಿಯ ಅಭಿಪ್ರಾಯ— ಅಝಾದ ಸೈನಿಕರ ಬಿಡುಗಡೆ ಬಗ್ಗೆ ಕೌನ್ಸಿಲ ಆಫ ಸ್ಟೇಟದ ಬೇಡಿಕೆ

ಈ ವಾರದ ಪ್ರಾರಂಭದಲ್ಲಿ (ಫೆ. ೧೮) ಶಾಸನ ಸಭೆಯ ಮುಂದೆ ಮಂಡಿಸಲ್ಪಟ್ಟ ಸರ್ ಎಡ್ವರ್ಡ ಬೆಂಥಾಲರ ರೇಲ್ವೇ ಮುಂಗಡ ಪತ್ರದಲ್ಲಿ ೪೮ ಕೋಟಿ ರೂಪಾಯಿಯಷ್ಟು ಆದಾಯದ ಇಳಿತವಾಗುವದೆಂಬ ನಿರೀಕ್ಷೆಯಿದ್ದರೂ ಕೆಳವರ್ಗದ ಪ್ರಯಾಣಿಕರಿಗೆ ಅಧಿಕತರ ಸೌಕರ್ಯವನ್ನೊದಗಿಸುವ ಆಶೆಯನ್ನು ಒಳಗೊಂಡು ಆಶಾದಾಯಕವಾಗಿತ್ತೆಂದು ಹೇಳಬೇಕು.

### ಆಯ-–ವ್ಯಯ

೧೯೪೫-೪೬ ರಲ್ಲಿ ೨೨೫ ಕೋಟಿಗಳಷ್ಟಿರುವ ರೇಲ್ವೆ ಆಯವನ್ನು ಸೈನ್ಯ ಖಾತೆಯ ಸರಕುಗಳ ಸಾರಿಗೆ ಕಡಮೆಯಾಗುವ ನಿರೀಕ್ಷೆಯಿಂದ ರೇಲ್ವೆ ಮಂತ್ರಿ ಬೆಂಥಾಲರು ೧೯೪೬-೪೭ ರ ವರ್ಷಕ್ಕೆ ೧೭೭ ಕೋಟಿಗಳೆಂದೇ ಹಿಡಿದರು. ಆದರೆ ೧೯೪೫-೪೬ ರಲ್ಲಿ ೧೬೯.೩೦ ಕೋಟಿಗಳಷ್ಟಿದ್ದ ವೆಚ್ಚದಲ್ಲಿಯೂ ೪೩.೫೭ ಕೋಟಿ ಕಡಿಮೆ ಹಿಡಿಯಲಾಗಿರುವದರಿಂದ ೧೯೪೬-೪೭ ರ ವೆಚ್ಚ ೧೨೫.೭೩ ಕೋಟಿಯೆಂದು ಇಟ್ಟುಕೊಂಡಿದ್ದಾರೆ. ಹೀಗೆ ೫೧.೨೭ ಕೋಟಿ ರೂಪಾಯಿ ಉಳಿತಾಯವಾದಂತಾಗುವದು. ೧೯೪೫—೪೬ ರ ತಿದ್ದಿದ ಅಂದಾಜಿನಂತೆ ೫೫.೭೦ ಕೋಟಿ ಉಳಿತಾಯವಾಗುವದು. ಈ ಮುಂದಿನ ವರ್ಷದ ೪॥ ಕೋಟಿಯಷ್ಟು ಉಳಿತಾಯ ಕಡಿಮೆಯಾದಂತಾಯಿತು.

### ಸೌಕರ್ಯದ ಆಶ್ವಾಸನ

ಈ ವರ್ಷದ ಉಳಿತಾಯದಲ್ಲಿ ೩೨ ಕೋಟಿ ರೂ. ಗಳನ್ನು ಸರಕಾರದ ಆದಾಯ ಖಾತೆಗೆ ಒಪ್ಪಿಸಿಬಿಡಬೇಕೆಂದು ಸರ್ ಎಡ್ವರ್ಡರು ಸೂಚಿಸುತ್ತಾರೆ. ೪ ಕೋಟಿ ರೂಪಾಯಿಗಳನ್ನು ಸೌಕರ್ಯ ಸಹಾಯ ನಿಧಿಗೆ ಒಪ್ಪಿಸಬೇಕೆಂದು ಅವರು ಸೂಚಿಸುತ್ತಾರೆ. ಈ ೪ ಕೋಟಿ ರೂಪಾಯಿಗಳಲ್ಲದೆ ಹಿಂದಿನ ವರ್ಷಗಳ ಕಾದಿಟ್ಟ ನಿಧಿಯಿಂದ ೧೨ ಕೋಟಿ ರೂಪಾಯಿಗಳೆನ್ನೆತ್ತಿ ಈ ನಿಧಿಗೆ ಪ್ರಾರಂಭಿಕ ಗಂಟಾಗಿ ಕೊಡಲಾಗುವದು. ಈ ನಿಧಿಯಿಂದ ಮುಖ್ಯವಾಗಿ ಪ್ರವಾಸಿಕರ ಅದೂ ಇಂಟರ ಮತ್ತು ಮೂರನೆ ವರ್ಗಗಳ ಪ್ರವಾಸಿಕರ ಸೌಕರ್ಯಗಳನ್ನು ಹೆಚ್ಚಿಸಲಾಗುವದು ಹೆಚ್ಚು ಆರಾಮವಾಗಿ ಕುಳಿತುಕೊಳ್ಳಲು ಹೆಚ್ಚು ಏಕಾಂತದಲ್ಲಿ ಪ್ರಯಾಣ ಮಾಡಲು ಅನುಕೂಲವಾಗುವಂತೆ ಹೊಸ ಡಬ್ಬಿಗಳನ್ನು ಕಟ್ಟಿಸಲಾಗುವದು. ಶೌಚಕೂಪ, ನೀರಿನ ಪೂರೈಕೆ ದೀಪಗಳನ್ನೂ ಹೆಚ್ಚಿಸಲಾಗುವದು. ಸ್ತ್ರೀಯರಿಗಾಗಿಯೂ ಕಾದಿಡಬಯಸುವವರಿಗಾಗಿಯೂ ಚಿಕ್ಕ ಚಿಕ್ಕ ಡಬ್ಬಿಗಳನ್ನು ಕಟ್ಟಲಾಗುವದು, ಎಂದು ಬೆಂಥಾಲರು ಹೇಳಿದರು.

ಬೆಂಥಾಲರು ರೇಲ್ವೇ ನೌಕರರಿಗೂ ಸಾರ್ವಜನಿಕರಿಗೂ ಪರಿಹಾರ ಕೊಡುವ ಸಲುವಾಗಿ ಒಂದು ಹೊಸ ನಿಧಿಯನ್ನು ಪ್ರಾರಂಭಿಸಬೇಕೆಂದು ಸೂಚಿಸಿರುವರಲ್ಲದೆ ಯುದ್ಧ ಕಾಲದಲ್ಲಿ ನಿಂತು ಹೋಗಿದ್ದ ಮಾರ್ಗಗಳನ್ನು ಪುನಃ ತೆರೆಯುವ ಸಲುವಾಗಿ ೨ ಕೋಟಿ ರೂ. ಪರಿಹಾರ ಕಾರ್ಯಕ್ಕಾಗಿ ಮತ್ತು ಹೊಸ ಮಾರ್ಗ ಹಾಕಿಸಲು ೨೨ ಕೋಟಿ ರೂಪಾಯಿ ತಗೆದಿಡಬೇಕೆಂದು ಸೂಚಿಸಿದ್ದಾರೆ.

### ಇತರ ಸಂಗತಿಗಳು

ಜಗತ್ತಿನ ಬೇರೆ ದೇಶಗಳಲ್ಲಿ ರೇಲ್ವೆ ಸಮಸ್ಯೆಯನ್ನೆದುರಿಸಲು ಬಹಳ ಶ್ರಮವಾಗುತ್ತಿದೆಯೆಂದೂ ಆ ಕಾರಣದಿಂದ ರೇಲ್ವೆ ದರಗಳನ್ನು ಅವುಗಳು ನೂರಕ್ಕೆ ೨೦-೨೫ ರಷ್ಟು ಹೆಚ್ಚಿಸುವ ಸ್ಥಿತಿ ಬಂದಿದೆಯೆಂದೂ ಹೇಳಿ ಬೆಂಥಾಲರು ಹಿಂದುಸ್ಥಾನದಲ್ಲಿ ರೇಲ್ವೆಗಳ ಸ್ಥಿತಿ ಬಹಳ ಭದ್ರವಾಗಿರುವದರಿಂದ ಈ ವರ್ಷ ದರ ಹೆಚ್ಚಿಸುವ ಪ್ರಸಂಗವಿಲ್ಲವೆಂದರು. ಇನ್ನು ಮುಂದಾದರೂ ವ್ಯವಹಾರ ಹೀಗೆಯೇ ಸಾಗಿದರೆ ಆ ಸಂಭಾವ್ಯತೆ ಒದಗಲಾರದೆಂದು ಅವರು ಆಶ್ವಾಸನವಿತ್ತರು. ಈ ವರೆಗೆ ಅಲಕ್ಷಿಸಲಾಗಿದ್ದ ಪ್ರಯಾಣಿಕರ ಸೌಕರ್ಯಗಳನ್ನು ಉತ್ತಮಗೊಳಿಸುವದಲ್ಲದೆ ಒಕ್ಕಲತನದ ಉತ್ಪಾದನೆಗೆ ನೆರವು ಕೊಡುವದಕ್ಕೂ ರೇಲ್ವೆ ಸಿದ್ಧವಾಗುವದು.

ಕೂಲಿಕಾರರ ವಿಷಯದಲ್ಲಿ ಅನಾವಶ್ಯಕ ಕಡಿತವಾಗಿಲ್ಲ. ಇದು ವರೆಗೆ ಕೇವಲ ೮೦೦೦ ಕೂಲಿಕಾರರನ್ನೂ ಕಡಿಮೆ ಮಾಡಲಾಗಿದೆ ಅನು ಸಂಪೂರ್ಣ ನಿಲ್ಲಿಸಿಬಿಟ್ಟ ವಿಭಾಗಗಳಿಂದ ಹೆಚ್ಚು ಪ್ರಮಾಣದಿಂದ ಕೆಲಸಗಾರರನ್ನು ಕಡಿಮೆಮಾಡಬಾರದೆಂದೇ ಕಡಿತವಾದ ಬೇರೆ ೮೦೦೦ ಕೆಲಸಗಾರರನ್ನು ಬೇರೆ ಶಾಖೆಗಳಲ್ಲಿ ನೇಮಿಸಿಕೊಳ್ಳಲಾಗಿದೆಯೆಂದು ಬೆಂಥಾಲರು ಹೇಳಿದರು.

ಯುದ್ಧ ಪ್ರಾರಂಭದಲ್ಲಿ ಖಾತೆಯ ಹತ್ತಿರ ೭,೨೯೭ ಇಂಜನಗಳೂ ೧,೯೩,೮೦೫ ವಾಗೀನುಗಳೂ ಇದ್ದವು ಹೊರಗಿನಿಂದ ನಿರೀಕ್ಷಿಸಲಾದುದು ಬಂದರೆ ಈಗ ೮,೫೪೧ ಎಂಜಿನಗಳು ೨,೩೯,೦೦೦ ವಾಗೀನುಗಳೂ ಆಗುವವೆಂದು ಅವರು ತಿಳಿಸಿದರು.

ಕೊನೆಗೆ ಅವರೊಂದು ಎಚ್ಚರಿಕೆಯನ್ನು ಕೊಟ್ಟರು. ಸೌಕರ್ಯಗಳ ಸುಧಾರಣೆ, ಯುದ್ಧಕಾಲದ ಆಶ್ವಾಸನೆ ಮೊದಲಾದವುಗಳನ್ನು ಪೂರೈಸಲು ನಾವು ಬಹಳ ಮುಂಜಾಗ್ರತೆ ವಹಿಸಬೇಕಾಗುವದು. ರೇಲ್ವೆಗಳು ಭಾರತದ ಅಮೂಲ್ಯ ಆಸ್ತಿ. ಅವುಗಳನ್ನು ಜೋಕೆಯಿಂದ ನೋಡಿಕೊಳ್ಳಬೇಕು.

### ಚರ್ಚೆ

ರೇಲ್ವೆ ಮಂಗಡ ಪತ್ರದ ಚರ್ಚೆಯಲ್ಲಿ ಬಹಳೇನೂ ಹುರುಳು ಇದ್ದಿಲ್ಲ. ಮುಖ್ಯವಾಗಿ ಆಕ್ಷೇಪಗಳು ರೇಲ್ವೇ ಪ್ರಯಾಣಿಕರ ಸೌಕರ್ಯದ ಸುಧಾರಣೆ, ಮುಸ್ಲಿಮ ಲೀಗದವರಿಂದ ತಮ್ಮ ಜಾತಿಯವರಿಗೆ ಹೆಚ್ಚಿನ ಸವಲತ್ತುಗಳ ಬೇಡಿಕೆ ಮತ್ತು ಕೂಲಿಕಾರರಿಗೆ ಸೌಕರ್ಯ, ಯೋಗ್ಯ ಸಂಬಳ ಕೊಡಬೇಕು ಎನ್ನುವ ವಿಷಯಗಳನ್ನು ಕೇಂದ್ರವಾಗಿಟ್ಟುಕೊಂಡಿದ್ದವು. ಅಂತೆಯೇ ಸರ್ ಎಡ್ವರ್ಡರು ಚರ್ಚೆಗೆ ಕೊಟ್ಟ ಉತ್ತರದಲ್ಲಿ ತಮ್ಮ ಅಂದಾಜು ಪತ್ರಿಕೆಯ "ಹಣಕಾಸಿನ ವಿಧಾನ" ಗಳನ್ನು ಯಾರೂ ಯಶಸ್ವಿಯಾಗಿ ಟೀಕಿಸಲಿಲ್ಲವೆಂದು ಗರ್ವದಿಂದ ಹೇಳಿಕೊಂಡರು. ಕೂಲಿಕಾರರ ಸವಲತ್ತುಗಳ ಸಂಬಂಧದಲ್ಲಿ ಅವರು ಮಾತಾಡುತ್ತ ಈಗಿನಂತೆ ರೇಲ್ವೆ ದರಗಳು ಕಡಿಮೆಯಾಗಿಯೆ ಉಳಿದರೆ ಕೂಲಿಕಾರರಿಗೆ ಹೆಚ್ಚಿನ ಅನುಕೂಲ ಕೊಡುವದು ಸಾಧ್ಯವಿಲ್ಲ, ಅದನ್ನು ಕೊಡಬೇಕಾಗಿದ್ದರೆ ಜನ ಹೆಚ್ಚು ಹಣಕೊಡಲು ಸಿದ್ಧವಾಗಬೇಕು ಎಂಬ ಸಮಸ್ಯೆಯನ್ನು ಸಭೆಯ ಮುಂದಿರಿಸಿದರು.

### ಎರಡು ಗೊತ್ತುವಳಿ

ಹಿಂದುಸ್ಥಾನದಲ್ಲಿ ದಶಾಂಶ ನಾಣ್ಯ ಪದ್ಧತಿಯನ್ನು ಬಳಕೆಗೆ ತರಬೇಕೆಂದು ಹಣಕಾಸಿನ ಮಂತ್ರಿ ಆರ್ಚಿಬಾಲ್ಡ ರೌಲಂಡ್ಸರು ಒಂದು ಗೊತ್ತುವಳಿಯನ್ನು ಮಂಡಿಸಿದರು. ೧ ರೂಪಾಯಿ (೧೦೦ ಸೆಂಟ್ಸ) ಅರ್ಧ ರೂಪಾಯಿ (೫೦ ಸೆಂಟ್ಸ) ಕಾಲು ರೂಪಾಯಿ (೨೫ ಸೆಂಟ್ಸ) ನಾಣ್ಯಗಳೆಂದು ನಿರ್ದೇಶಿಸಲ್ಪಡಬೇಕೆಂದೂ ಅರ್ಧ ಸೆಂಟಗಿಂತ ಕಡಿಮೆ ನಾಣ್ಯ ಇರುವಂತಿಲ್ಲವೆಂದೂ ಅವರ ಸೂಚನೆಯಾಗಿತ್ತು. ಯುದ್ಧ ಕಾಲದ ಅಪ್ರಿಯ ನಾಣ್ಯಗಳನ್ನು ಕಿತ್ತು ಹಾಕಿ ಹೊಸ ನಾಣ್ಯಗಳನ್ನು ಹೊರಡಿಸುವ ಕಾಲ ಈಗ ಬಂದಿರುವದರಿಂದ ನಾಣ್ಯಪದ್ಧತಿಯನ್ನು ಬದಲಿಸುವದಕ್ಕೆ ಇದೇ ಯೋಗ್ಯ ಸಮಯವೆಂದು ಅವರು ಅಭಿಪ್ರಾಯಪಟ್ಟು ದಶಾಂಶ ನಾಣ್ಯಪದ್ಧತಿಯಿಂದ ಲೆಕ್ಕಪತ್ರಗಳನ್ನಿಡಲು ಹೇಗೆ ಸುಲಭವಾಗುವದೆಂದು ವಿವರಿಸಿದರು.

ಬಲುಚಿಸ್ಥಾನ ಮತ್ತು ಗುಡ್ಡಗಾಡು ನಿವಾಸಿಗಳ ವಿಷಯದಲ್ಲಿ ಹಿಂದುಸ್ಥಾನ ಸರಕಾರದ ವಿದೇಶ ಖಾತೆಗೆ ಸಲಹೆ ನೀಡುವದಕ್ಕಾಗಿ ೮ ಜನರ ಅಧಿಕಾರೇತರ ಸಮಿತಿಯನ್ನು ನೇಮಿಸಬೇಕೆಂಬ ಗೊತ್ತುವಳಿಯನ್ನು ವಿದೇಶ ಕಾರ್ಯದರ್ಶಿ ವೇಟಮನ್ನರು ಮಂಡಿಸಿದರು. ಈ ಸಮಿತಿಯ ಅಧಿಕಾರ ಕ್ಷೇತ್ರದ ನಿರ್ಣಯವಾಗುವ ವರೆಗೆ ಈ ಸಮಿತಿಗೆ ಸದಸ್ಯರನ್ನು ನೇಮಿಸುವದನ್ನು ಮುಂದೂಡಬೇಕೆಂದು ವಿರೋಧಿ ಪಕ್ಷದ ಉಪಧುರೀಣ ಅಸಫಅಲಿಯವರು ಹೇಳಿದರು.

ಈ ಎರಡೂ ಗೊತ್ತುವಳಿಗಳ ಚರ್ಚೆಯನ್ನು ಮುಂದೆ ಹಾಕಲಾಯಿತು.

### ರೇಲ-–ರಸ್ತೆ ಸಂಯುಕ್ತೀಕರಣ

ರೇಲ ರಸ್ತೆ ಸಂಯುಕ್ತೀಕರಣದ ಪ್ರಶ್ನೆಯನ್ನು ವಿಚಾರಿಸಲು ನಿಯಮಿಸಲ್ಪಟ್ಟದ್ದ ಉಪಸಮಿತಿಯವರು ವರದಿ ಸಿದ್ಧಪಡಿಸಿ ಶಾಸನ ಸಭೆಯ ಮುಂದೆ ಇರಿಸಿದ್ದಾರೆ. ಬೇಗನೆ ಪ್ರಾಂತಗಳಲ್ಲಿ ಬೇರೆ ಸರಕಾರಗಳು ಬರಲಿರುವದರಿಂದ ರೇಲ್ವೆಯವರು ರಸ್ತೆ ಸಾರಿಗೆಯಲ್ಲಿ ಹಣ ತೊಡಗಿಸಬಾರದು ಮತ್ತು ರೇಲ ರಸ್ತೆ ಸಂಯುಕ್ತೀಕರಣದಲ್ಲಿ ಭಾಗವಹಿಸುವದನ್ನು ರೇಲ್ವೆಯವರು ಮುಂದೆ ಹಾಕಬೇಕು ಎಂದು ಆ ವರದಿಯ ಅಭಿಪ್ರಾಯ. ೧೯೪೫ ರಲ್ಲಿ ರೇಲ-ರಸ್ತೆ ಸಂಯುಕ್ತೀಕರಣ ಮತ್ತು ಅದಕ್ಕಾಗಿ ಕಂಪನಿಗಳ ಸ್ಥಾಪನೆಯ ಬಗ್ಗೆ ಶಾಸನ ಸಭೆಯಲ್ಲಿ ಆದ ಒಡಂಬಡಿಕೆಯನ್ವಯ ಈ ವರೆಗೆ ಅನೇಕ ಪ್ರಾಂತಗಳಲ್ಲಿ ಸಲಹೆ ಪಡೆಯುವ ಅಥವಾ ವಿಚಾರವಿನಿಮಯ ಮಾಡುವ ಕೆಲಸ ತೃಪ್ತಿಕರವಾಗಿ ನಡೆದಿಲ್ಲ. ಆದುದರಿಂದ ೧೯೩೯ ರ ಮೋಟರ ಕಾಯಿದೆಯ ಎಲ್ಲ ಸೌಕರ್ಯಗಳನ್ನು ಒದಗಿಸುವಂತೆ ೧೯೪೫ ರ ೩೧ ನೆ ಕಾಯಿದೆಯಲ್ಲಿಯೆ ತಿದ್ದುಪಡಿಯಾಗಬೇಕು. ಇಂಥ ಸಾರಿಗೆಗಳನ್ನು ನಡೆಸಬಾರದೆಂದು ಆಪರೇಟರರ ಮೇಲೆ ಹೊರಡಿಸಿರುವ ನೋಟೀಸುಗಳನ್ನು ಹಿಂತೆಗೆದು ರದ್ದುಗೊಳಿಸಲಾಗಿರುವ ಸಾರಿಗೆ ಲಾಯಸನ್ಸುಗಳನ್ನು ಮರಳಿ ಕೊಡಬೇಕು ಎಂದು ಸಮಿತಿ ಅಭಿಪ್ರಾಯ ಪಟ್ಟಿದೆ. ಈ ವಿಷಯ ಇನ್ನೂ ಚರ್ಚೆ ನಡೆದಿರುವಾಗಲೇ ಯುಕ್ತ ಪ್ರಾಂತದ ಅಧಿಕಾರಿಗಳು ವ್ಯವಸ್ಥಾಪಕ ಏಜಂಟರೊಡನೆ ಒಪ್ಪಂದ ಮಾಡಿಕೊಂಡದ್ದು ಶಾಸನ ಸಭೆಯಲ್ಲಾದ ಒಡಂಬಡಿಕೆಗೆ ವಿರುದ್ಧವೆಂದು ಬಹುಸಂಖ್ಯಾಕ ಸಮಿತಿ ಸದಸ್ಯರು ಹೇಳಿದ್ದಾರೆ.

ಆದರೆ ಈ ವರದಿಗೆ ರೇಲ್ವೆ ಮಂತ್ರಿ ಬೆಂಥಾಲರು ತಮ್ಮ ಅಸಮ್ಮತಿಯ ಟಿಪ್ಪಣಿ ಜೋಡಿಸಿರುವರು. ರೇಲ ರಸ್ತೆ ಯೋಜನೆಯನ್ನು ಮುಂದೆ ಹಾಕಬಾರದು, ಈಗ ಪ್ರಾಂತಗಳಲ್ಲಿ ಬಹುತರ ಆಪರೇಟರರು ಯೋಜನೆಗೆ ಸಮ್ಮತಿಸಿದ್ದಾರೆ. ಈ ಯೋಜನೆಯನ್ನು ಮುಂದೊತ್ತುವದರಿಂದ ಒಡಂಬಡಿಕೆಯನ್ನು ಮುರಿದಂತಾಗಲಿಲ್ಲ ಎಂದು ಅವರು ಆ ಟಿಪ್ಪಣಿಯಲ್ಲಿ ಅಭಿಪ್ರಾಯಪಟ್ಟಿದ್ದಾರೆ.

ಮಿ. ಎಚ್. ಜಿ. ಸ್ಟೋಕ್ಸರು ಯೋಜನೆಯನ್ನು ಮೇ ೩೧ ರ ವರೆಗೆ ಮುಂದೂಡಬೇಕೆಂದು ಒಂದು ಟಿಪ್ಪಣಿಯನ್ನು ಸೇರಿಸಿದ್ದಾರೆ.

### ಪ್ರಶ್ನೋತ್ತರಗಳು

ಇದೇ ಮಾರ್ಚ ೪ ರಿಂದ ೯ ರ ವರೆಗೆ ನಡೆಯಲಿರುವ ವಿಜಯೋತ್ಸವಕ್ಕೆ ೧೦ ಲಕ್ಷ ರೂಪಾಯಿ ವೆಚ್ಚ ತಗಲುವದೆಂದು ಶ್ರೀ ಅನಂತಶಯನಂ ಅಯ್ಯಂಗಾರರಿಗೆ ಯುದ್ಧ ಕಾರ್ಯದರ್ಶಿಗಳು ತಿಳಿಸಿದರು. ದಿಲ್ಲಿಯಲ್ಲಿ ಈಗ ಪುನಃ ಕೂಚು ಮಾಡುವ ಅವಶ್ಯಕತೆಯೇನೆಂದು ಕೇಳಿದರೆ, "ದೇವರ ಮತ್ತು ನಮ್ಮ ಗೆಳೆಯರ ಸಹಾಯದಿಂದ ನಾವು ಬಲಾಢ್ಯ ಶತ್ರುವನ್ನು ಗೆದ್ದಿದ್ದೇವೆ" ಎಂದುತ್ತರ ಬಂತು.

೧೯೩೯-೪೦ ರಲ್ಲಿ ೩೦ ಲಕ್ಷ, ೪೦-೪೧ ರಲ್ಲಿ ೧೮೦ ಲಕ್ಷ, ೧೯೪೧-೪೨ ರಲ್ಲಿ ೯೪೦ ಲಕ್ಷ, ೧೯೪೨-೪೩ ರಲ್ಲಿ ೧೬೦ ಲಕ್ಷ, ೧೯೪೩-೪೪ ರಲ್ಲಿ ೯೦ ಲಕ್ಷ. ೧೯೪೪-೪೫ ರಲ್ಲಿ ೩೬೫ ಲಕ್ಷ, ೧೯೪೫-೪೬ ರಲ್ಲಿ ೧೩೩ ಲಕ್ಷ ಔಂಸ ಬೆಳ್ಳಿಯನ್ನು ರಿಝರ್ವ ಬ್ಯಾಂಕು ಮಾರಿತೆಂದೂ ಬ್ರಿಟಿಶ ಹಾಗು ಅಮೇರಿಕನ್ ಸರಕಾರದ ಪರವಾಗಿ ೧೯೪೩-೪೪ ರಲ್ಲಿ ೩೩ ಲಕ್ಷ ಔಂಸ, ೪೪-೪೫ ರಲ್ಲಿ ೩೨ ಲಕ್ಷ, ೪೫-೪೬ ರಲ್ಲಿ ೯ ಲಕ್ಷ ಔಂಸ ಚಿನ್ನವನ್ನು ಮಾರಿತೆಂದೂ ಮನು ಸುಬೇದಾರರಿಗೆ ತಿಳಿಸಲಾಯಿತು.

ಅಝಾದ ಹಿಂದ ಸೇನೆಯ ಗಲ್ಲಿಗೇರಿಸಲ್ಪಟ್ಟ ೯ ಜನರ ವಿವರಗಳನ್ನು ಯುದ್ಧ ಕಾರ್ಯದರ್ಶಿಗಳು ಕೊಟ್ಟರು.

### ಕೌನ್ಸಿಲ ಆಫ ಸ್ಟೇಟ

ಕೌನ್ಸಿಲ ಆಫ ಸ್ಟೇಟದ ಅಧಿವೇಶನ ತಾ. ೧೮ ಕ್ಕೆ ಸರ್ ಮಣಿಕಜಿ ದಾದಾಭಾಯಿಯವರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು.

ಶ್ರೀ ಕಾಲಿಕ್ಕರರು ಅಝಾದ ಹಿಂದ ಸೈನಿಕರ ಮೇಲೆ ಹೂಡಲಾಗಿರುವ ಖಟ್ಲೆಗಳನ್ನೆಲ್ಲ ಹಿಂತೆಗೆದು ಅವರನ್ನು ಅನಿರ್ಬಂಧವಾಗಿ ಬಿಡುಗಡೆ ಮಾಡಬೇಕೆಂದು ಮಂಡಿಸಿದ ಗೊತ್ತುವಳಿ ೧೩ ವಿರುದ್ಧ ೨೩ ಮತಗಳಿಂದ ಬಿದ್ದು ಹೋಯಿತು.

–೧೪ನೇ ಪುಟಕ್ಕೆ

## ಅ ಭಾ ಪತ್ರಿಕಾ ಸಂಪಾದಕರ ಪರಿಷತ್ತು

### ಆಹಾರ ಕಾರ್ಯದರ್ಶಿಗಳ ಸಹಕಾರ ಯಾಚನೆ

ಅಖಿಲ ಭಾರತ ಪತ್ರಿಕಾ ಸಂಪಾದಕರ ಸಮ್ಮೇಲನ ತಾ ೧೬-೧೭ ರಲ್ಲಿ ಅಲಹಾಬಾದದಲ್ಲಿ ಕಲಕತ್ತೆಯ ಅಮೃತ ಬಝಾರ ಪತ್ರಿಕಾ ಸಂಪಾದಕ ತುಷಾರಕಾಂತಿ ಘೋಷರ ಅಧ್ಯಕ್ಷತೆಯಲ್ಲಿ ನ...ಯಿತು. ಘೋಷರು ತಮ್ಮ ಭಾಷಣದಲ್ಲಿ ಪತ್ರಿಕಾ ಸ್ವಾತಂತ್ರ್ಯ ಸಂಪೂರ್ಣವಾಗಿ ದೊರೆಯಬೇಕಾದರೆ ದೇಶದ ಸ್ವಾತಂತ್ರ್ಯ ಅವಶ್ಯವಾಗಿದೆಯೆಂದು ಭಾಷಣ ಮಾಡಿದ್ದಲ್ಲದೆ ಕಾರ್ಯನಿರತ ಪತ್ರಿಕೋದ್ಯೋಗಿಗಳಿಗೊಂದು ತಾಮ್ರಪಟ ಘೋಷಿಸಲ್ಪಡಬೇಕೆಂದು ಅಭಿಪ್ರಾಯಪಟ್ಟರು.

ಆಹಾರ ಸಮಸ್ಯೆಯನ್ನು ಬಗೆಹರಿಸಲು ಪತ್ರಿಕೆಗಳು ಸಹಕರಿಸಬೇಕೆಂದು ಬಿನವಿಸಲು ಹಿಂದುಸ್ಥಾನ ಸರಕಾರದ ಆಹಾರ ಕಾರ್ಯದರ್ಶಿ ಶ್ರೀ ಸೇನ ಮತ್ತು ಪ್ರಚಾರ ಮಂತ್ರಿ ಸರ್ ಅಕ್ಬರ ಹೈದರಿಯವರು ಪರಿಷತ್ತಿಗೆ ಬಂದಿದ್ದರು. ಹಿಂದೂ ಪತ್ರಿಕೆಯ ಶ್ರೀನಿವಾಸನ್ನರು ಅವರಿಗೆ, ಸರಕಾರ ಪತ್ರಿಕೆಗಳಿಗೆ ಸರಿಯಾದ ವಿವರ ಕೊಡುವ ವಿಷಯದಲ್ಲಿ ಮಾಡುವ ಸಂಶಯವನ್ನು ...ನವರಿಕೆ ಮಾಡಿಕೊಟ್ಟು ಹೀಗಾದರೆ ಹೇಗೆ ಸಹಕರಿಸಬೇಕೆಂದು ಕೇಳಿದರು. ಪತ್ರಿಕೆಗಳ ಸಹಾಯದಿಂದ ಲಕ್ಷಾಂತರ ಜನರ ಪ್ರಾಣಗಳುಳಿಯಂತಿದ್ದರೆ ಸಹಕಾರ ನೀಡುವುದಾಗಿ ಅಧ್ಯಕ್ಷರು ಹೇಳಿದರು.

ಅ. ಭಾ. ಪತ್ರಿಕಾ ಸಂಪಾದಕರ ಹೊಸ ಸ್ಥಾಯಿ ಸಮಿತಿಗೆ ಈ ಕೆಳಗಿನವರು ಆರಿಸಿ ಬಂದಿದ್ದಾರೆ.

ಎಸ್ ಎ ಬ್ರೆಲ್ವಿ (ಕ್ರಾನಿಕಲ) ಸರ್ ಫ್ರಾನಿಸ ಲೋ (ಟಾಯಿಮ್ಸ) ಕೆ ಶ್ರೀನಿವಾಸನ್ (ಹಿಂದೂ) ಜೆ ಎಸ್ ಕರಂದಿಕರ (ಕೇಸರಿ) ಎ ಡಿ ಮಣಿ (ಹಿತವಾದ), ಡಬ್ಲೂ ಸಿ ವರ್ಡ್ಸವರ್ಥ (ಸ್ಟೇಟ್ಸಮನ)ಕೆ ರಾಮರಾವ (ನ್ಯಾಶನಲ್ ಹೆರಾಲ್ಡ) ಕೆ ಪುನ್ನಯ್ಯ (ಸಿಂಧ ಅಬ್ಝರ್ವರ) ಜೆ ಸಿ ಹಿಮಕರ (ಜಾಗ್ರತಿ) ಬಿ. ಸೇನ ಗುಪ್ತ (ಯು ಪ್ರೆ) ದೇವದಾಸ ಗಾಂಧಿ (ಹಿಂದುಸ್ಥಾನ ಟಾಯಿಮ್ಸ) ಅಮೃತಲಾಲ ಶೇಠ (ಜನ್ಮಭೂಮಿ) ಜೆ. ಎನ್ ಶಹಾಣಿ (ನ್ಯಾಶನಲ್ ಕಾಲ) ಕೆ ಶ್ರೀನಿವಾಸನ (ಕಮರ್ಸಿಯಲ್ ಇಂಡಿಯಾ) ಭರತನ್ (ಅ ಪ್ರೆ) ಸಿ. ಆರ್. ಶ್ರೀನಿವಾಸನ್ (ಸ್ವದೇಶಮಿತ್ರನ್) ಎಚ್. ಆರ್ ಮೋಹರೆ (ಸಂಯುಕ್ತ ಕರ್ನಾಟಕ) ... ಅಳ್ವಾ (ಫೋರಂ) ಬಿ ಪಿ ಮಿಶ್ರ (ಭಾರತ...) ...ಭರನಾಥ ಪಾಂಡೆ (ವಿಶ್ವವಾಣಿ) ಪಿ ಕೆ ಸೇನ ...ಬ ಪತ್ರಿಕಾ)

ಅಧ್ಯಕ್ಷರಾದ ಶ್ರೀ ತುಷಾರಕಾಂತಿ ಘೋಷರು ಈ ೭ ಜನರನ್ನು ಸಹಕಾರಿ ಸದಸ್ಯರನ್ನಾಗಿ ನೇಮಿಸಿಕೊಂಡಿದ್ದಾರೆ.

ಸರ್ ಉಷಾನಾಥ ಸೇನ, ಬಿ ಶಿವರಾವ (ಹಿಂದು) ಹಾಜಿ ನಾಜಿರುದ್ದೀನ (ಹಯಾತ) ಎ. ಆರ್. ಸಿದ್ದಿಕಿ (ಮಾರ್ನಿಂಗ ನ್ಯೂಜ); ಲಿಂಗರಾಜ ಮಿಶ್ರ ಪಿ. ಟಿ. ಚಂದ್ರ (ಟ್ರಿಬ್ಯೂನ) ಮುರಳಿ ಮನೋಹರ ಪ್ರಸಾದ (ಸರ್ಚಲಾಯಿಟ)

# ಅಂತರ್ ರಾಷ್ಟ್ರೀಯ

## ಯುಕ್ತರಾಷ್ಟ್ರಗಳ ಅಧಿವೇಶನ ಮುಕ್ತಾಯ

೫ ವಾರಗಳವರೆಗೆ ವಾದವಿವಾದದ ಬಿರುಗಾಳಿಯೊಡನೆ ಸಾಗಿದ್ದ ಯುಕ್ತರಾಷ್ಟ್ರಗಳ ಲಂಡನ್ ಅಧಿವೇಶನ ಮೊನ್ನೆ ಫೆಬ್ರುವರಿ ೧೪ ಕ್ಕೆ ಗಮನಾರ್ಹವಾದ ಐಕ್ಯದೊಡನೆ ಮುಕ್ತಾಯವಾಯಿತು. ಈ ಐಕ್ಯ, ಪುನಃ, ಸಂಕಟ ವಿಷಯದ ಐಕ್ಯವೇ ಆಗಿತ್ತು. ಜಾಗತಿಕ ಆಹಾರ ಬಿಕ್ಕಟ್ಟನ್ನು ಯುಕ್ತರಾಷ್ಟ್ರಗಳು ಒಕ್ಕಟ್ಟಾಗಿ ಎದುರಿಸಬೇಕೆಂದು ಪಂಚಮಹಾರಾಷ್ಟ್ರಗಳು ಸಾಧಾರಣ ಸಭೆಯ ಮುಂದೆ ಮಂಡಿಸಿದ ಗೊತ್ತುವಳಿ ಕೊನೆಯದಾಗಿ ತಾ ೧೪ ಕ್ಕೆ ಚರ್ಚೆಗೆ ಬಂದಾಗ ೫೧ ಯುಕ್ತರಾಷ್ಟ್ರಗಳು ಒಗ್ಗೊರಲಿನಿಂದ ಅದಕ್ಕೆ ಬೆಂಬಲವಿತ್ತವು. ಬೆವಿನ್ನರು ೧೦೦ ಕೋಟಿ ಜನರನ್ನು ಆಹಾರ ಕೊರತೆ ಎದುರಿಸಿದೆಯೆಂದರು. ವಿವಿಧ ರಾಷ್ಟ್ರಗಳು ಈ ವಿಷಯದಲ್ಲಿ ಯಥಾಶಕ್ತಿ ಸೇವೆಯನ್ನು ನೀಡುವ ಪಣತೊಟ್ಟವು. ಸಾಧಾರಣವಾಗಿ ಆಹಾರವನ್ನು ಆಯಾತ ಮಾಡುತ್ತಿರುವ ಡೆನ್ಮಾರ್ಕ್ ಈ ವರ್ಷ ಹೊರಗಿನಿಂದ ಸಹಾಯ ಅಪೇಕ್ಷಿಸುವದಿಲ್ಲವೆಂದು ಹೇಳಿತು. ಆಸ್ಟ್ರೇಲಿಯಾದ ಪ್ರತಿನಿಧಿ ತನ್ನ ದೇಶ ಪರಮಾವಧಿ ಆಹಾರ ಮಿತವ್ಯಯ ಸಾಧಿಸಿ ಹೊರಗೆ ಕಳಿಸಲು ಪ್ರಯತ್ನಿಸುವದೆಂದ. ಕೆನಡಾದಲ್ಲಿ ೧೧ ಕೋಟಿ ಬುಶೆಲ್ (ಬುಶೆಲ್=೬೦ ಪೌಂ) ಸಂಗ್ರಹವನ್ನು ಜುಲೈ ೩೧ ಕ್ಕೆ ಮುಂಚಿತವಾಗಿ ಹೊರಗೆ ಕಳಿಸುವ ಏರ್ಪಾಡು ಮಾಡುವ ಭರವಸೆಯಿತ್ತ.

## ರಾಮಸ್ವಾಮಿಯವ ರವಿಷಾದಮಯ ಸೌಭಾಗ್ಯ

ಹಿಂದುಸ್ತಾನದ ಪ್ರತಿನಿಧಿ ರಾಮಸ್ವಾಮಿಯವರು ತಮ್ಮ ವಾಗ್ಮಿತೆಯಿಂದ ಸಭಾಭವನವನ್ನು "ಮಂತ್ರಮುಗ್ಧ" ಗೈದರೆಂದು ವರದಿಯಾಗಿದೆ. "ಹಿಂದುಸ್ತಾನ ಈ ಆಹಾರ ಕೊರತೆ ನೀಗಿಸಲು ಎಷ್ಟು ನೀಡುವದೆಂದು ವಾಗ್ದಾನವೀಯಲು ನಾನು ಬಂದಿಲ್ಲ, ಅದರೆ ನನ್ನ ದುರ್ದೈವಿ ದೇಶದಪರವಾಗಿ ಯಾಚಿಸಲು ಈ ವ್ಯಾಸಪೀಠವನ್ನೇರುವ ವಿಷಣ್ಣ ಸೌಭಾಗ್ಯ ನನ್ನದಾಗಿದೆ" ಎಂದರವರು. ಪ್ರಕೃತಿಯ ಪ್ರಕೋಪಕ್ಕೆ ಬಲಿಯಾದ ಹಿಂದುಸ್ತಾನದ ಮನ ಕರಗಿಸುವ ಚಿತ್ರವನ್ನು ಪ್ರತಿನಿಧಿಗಳ ಮುಂದಿರಿಸಿದರು. ಹಿಂದುಸ್ತಾನ ಮಾಂಸವೇ ಮೊದಲಾದ ಸಿರಿತನದ ವಸ್ತುಗಳನ್ನು ಬೇಡುವದಿಲ್ಲ. ತಲಾ ೮ ಔನ್ಸು ಧಾನ್ಯಗಳಿಂದಲೇ ಅದು ತೃಪ್ತವಾಗುತ್ತದೆ. ಯುದ್ಧ ನಿಮಿತ್ತವೇ ಉಂಟಾದ ಬಂಗಾಲದ ಬರಗಾಲದಲ್ಲಿ ೧೫ ಲಕ್ಷ ಜನರು—ಅನಸರ [illegible]ದಿಯಂತೆ ೩೦ ಲಕ್ಷ ಜನರು—ಸತ್ತರು. [illegible]ಥ ಸಮಯದಲ್ಲಿಯೂ ಆ ದೇಶದಲ್ಲಿದ್ದ [illegible]ಬ್ಬ ವಿದೇಶೀಯನು ಹಸಿವಿನಿಂದ ಬಳಲಿದ್ದಿಲ್ಲ. ಹಿಂದೀಯರ ಅತಿಥಿ ಸತ್ಕಾರದ ಪರಂಪರೆಯ ವಿಚಿತ್ರ ಉದಾಹರಣೆಯಿದು, ಎಂದು ಹೇಳಿ ರಾಮಸ್ವಾಮಿಯವರು ರಶಿಯನ್ ಪ್ರತಿನಿಧಿಯತ್ತ ಹೊಂಳಿ, ಯುದ್ಧಕಾಲದಲ್ಲಿ ನಾವು ಉಪವಾಸ ಸಾಯುತ್ತಿದ್ದಾಗ ಕೂಡ ರಶಿಯಾಕ್ಕೂ ಆಫ್ರಿಕೆಗೂ ಸಕ್ಕರೆ, ಚಹಾ, ಅರಿವೆಗಳನ್ನು ಕಳಿಸಿದ್ದೆವು. ಈಗ ರಶಿಯಾ ನಮಗೆ ಎಷ್ಟು ಧಾನ್ಯ ಕೊಡಲು ಸಮರ್ಥವಾಗಿದೆಯೆಂದು ಈ ಸಭೆಯು ಮುಂದೆ ಪ್ರಚುರಗೊಳಿಸುವುದೇ ಎಂದು ದೈನ್ಯದಿಂದ ಕೇಳಿದರು. ಯುಕ್ತರಾಷ್ಟ್ರಸಂಘವೆಂಬುದು ಜನಸಾಮಾನ್ಯರಿಗೆ ಸಜೀವ ಉದ್ಧಾರಕರ್ತೃವಿನಂತೆ ಕಾಣುತ್ತಿದೆ. ಅದನ್ನು ಸತ್ಯವಾಗಿ ಮಾಡಿ ತೋರಿಸಬೇಕೆಂದು ಅವರು ಪ್ರಾರ್ಥಿಸಿದರು.

ಗೊತ್ತುವಳಿ ಸರ್ವಾನುಮತದಿಂದ ಸ್ವೀಕೃತವಾಯಿತು. ಅಧಿವೇಶನ ಅದರೊಡನೆ ಮುಕ್ತಾಯವಾಯಿತು. ಯುಕ್ತರಾಷ್ಟ್ರ ಸಭೆ ಬಹಳ ಸಟ್ಟಿಗೆ ವಾಶಿಂಗ್‌ಟನ್ನಿನಲ್ಲಿ ಸಪ್ಟೆಂಬರಕ್ಕೆ ಸೇರಬಹುದು.

## ಬಡ ರಾಷ್ಟ್ರಗಳ ಗತಿ

ಭದ್ರತಾ ಮಂಡಲದಲ್ಲಿ ಈ ಬಾರಿ ರಶಿಯಾಕ್ಕೂ—ಅದರ ಜತೆಗೆ ಚಿಕ್ಕ, ದುರ್ಬಲರಾಷ್ಟ್ರಗಳಿಗೂ—ಸೋಲಿನ ಮಾಲೆಯೆ ಬಿತ್ತು. ಇಂಡೊನೇಶಿಯಾದ ವಿಷಯದಲ್ಲಿ ಯುಕ್ತರಾಷ್ಟ್ರಗಳ ವಿಚಾರಣಾ ಸಮಿತಿಯ ನೇಮಕವಾಗಬೇಕೆಂಬ ಯುಕ್ರೇನಿಯನ್ ಸೂಚನೆಯ ಮಾತು ಅಂತಿರಲಿ, ಇಜಿಪ್ಶಿಯನ್ ಪ್ರತಿನಿಧಿ ಸೂಚಿಸಿದಂತೆ ಇಂಡೊನೇಶಿಯಾದ ರಾಷ್ಟ್ರೀಯ ಚಳವಳಿಯನ್ನು ಹತ್ತಿಕ್ಕಲು ಬ್ರಿಟಿಶ ಸೈನ್ಯಗಳು ಉಪಯೋಗಿಸಲ್ಪಡುವದಿಲ್ಲೆಂಬ ಆಶ್ವಾಸನೆಯನ್ನು ಕೂಡ ಕೊಡಲು ಇಂಗ್ಲಂಡು ಸಿದ್ಧವಾಗಲಿಲ್ಲ. "ಇದು ಬ್ರಿಟಿಶ ಸರಕಾರದ ಗೌರವದ ಪ್ರಶ್ನೆ" ಎಂದರು ಬೆವಿನ್. "ಇತರ ಸರಕಾರಗಳಂತೆ ನಮ್ಮ ಸರಕಾರದ ಮೇಲೂ ನೀವು ವಿಶ್ವಾಸವಿಡಬೇಕು!" ವಿಷಯದ ಚರ್ಚೆ ದಿನಗಟ್ಟಲೆ ನಡೆದು ಈ ಎರಡು ಗೊತ್ತುವಳಿಗಳು ಮತಕ್ಕೆ ಹಾಕಲ್ಪಟ್ಟಾಗ ಅವುಗಳಿಗೆ ದರಿದ್ರ ಎರಡು ಮತಗಳು ದೊರೆತವು—ರಶಿಯಾದ್ದೊಂದು, ಪೋಲಂಡಿನದೊಂದು. ಬ್ರಿಟನ್ ಹಾಲಂಡುಗಳ ಮೂಗೇ ಮೇಲಾಯಿತು

ಸೀರಿಯಾ—ಲೆಬನಾನಗಳು ಎಲ್ಲ ವಿದೇಶಿ—ಅಂದರೆ ಬ್ರಿಟಿಶ ಮತ್ತು ಫ್ರೆಂಚ—ಸೈನ್ಯಗಳು ತಮ್ಮ ದೇಶದಿಂದ ತಡಮಾಡದೆ ಹೊರಟು ಹೋಗಬೇಕೆಂಬ ಆದೇಶ ಹೊರಡಿಸಬೇಕೆಂದು ಭದ್ರತಾ ಮಂಡಲಕ್ಕೆ ಬೇಡಿಕೊಂಡಿದ್ದವು. ಸೀರಿಯಾ ಲೆಬನಾನಗಳಲ್ಲಿ ಬೀಡುಬಿಟ್ಟುಕೊಂಡಿದ್ದ ಈ ಸೈನ್ಯಗಳ ಬಗ್ಗೆ ಕಳೆದ ದಿಸೆಂಬರದಲ್ಲಿ ಆ ದೇಶಗಳ ಬೆನ್ನ ಹಿಂದೆ ಆಂಗ್ಲೋ—ಫ್ರೆಂಚರು ತಮ್ಮೊಳಗೆ ಒಡಂಬಡಿಕೆ ಮಾಡಿಕೊಂಡಿದ್ದರು. ಆ ಒಡಂಬಡಿಕೆಯಲ್ಲಿ ಛಿದ್ರಬಂದು ಆವೆರಡೂ ಸೈನ್ಯ ಅಲ್ಲಿ ಗಪ್ಪನೆ ಕುಳಿತುಬಿಟ್ಟದ್ದವು. ಅವರವರೊಳಗಿನ ಜಗಳಲ್ಲದೆ ಸೀರಿಯಾ-ಲೆಬನಾನಗಳಲ್ಲಿ ಈ ಸೈನ್ಯಗಳಿರಬೇಕಾದ ಬೇರೆ ಪರಿಸ್ಥಿತಿಯೇನೂ ಇದ್ದಿಲ್ಲ. ಆದುದರಿಂದ ಅವು ಒಡನೆ ಹೊರಡಬೇಕು, ಎಂದು ಸೀರಿಯಾ ಲೆಬನಾನಗಳು ವಾದಿಸಿದವು. ಅದಕ್ಕೆ ರಶಿಯಾದ ಬೆಂಬಲವೂ ದೊರಕಿತು. ಆದರೆ ಬೆವಿನ್ನರೂ ಫ್ರೆಂಚ ವಿದೇಶಮಂತ್ರಿ ಬಿಡಾಲ್ಟರೂ ದಿಸೆಂಬರ ಒಡಂಬಡಿಕೆಗೆ ಸೀರಿಯಾ ಲೆಬನಾನಗಳಲ್ಲಿ "ಅನಿರ್ದಿಷ್ಟ ಅವಧಿಯವರೆಗೆ ಆಂಗ್ಲೋ—ಫ್ರೆಂಚರು ಉಳಿಯುವ ಅರ್ಥವಿಲ್ಲ" ಎಂದು ಸಮಾಧಾನ ಹೇಳಿದರು. ಅಮೇರಿಕೆಯ ವಿದೇಶಮಂತ್ರಿ ಸ್ಟೆಟಿನಸ್ಸರು ಮಧ್ಯಮಾರ್ಗವೊಂದನ್ನು ಸೂಚಿಸಿ "ತಡವಿಲ್ಲದೆ ಆಂಗ್ಲೋ—ಫ್ರೆಂಚ್ ಸೈನ್ಯಗಳನ್ನು ಹಿಂದೆ ಕರೆಸುವ ಸಲುವಾಗಿ ವಿಚಾರವಿನಿಮಯ ಮಾಡಿ ಪರಿಣಾಮಗಳನ್ನು ಭದ್ರತಾಮಂಡಲಕ್ಕೆ ವರದಿ ಮಾಡಬೇಕು" ಎಂದು ಗೊತ್ತುವಳಿ ತಂದರು. ಸೋವಿಯೆಟ್ ಪ್ರತಿನಿಧಿ ವಿಶಿನ್ಸ್ಕಿ ಇದನ್ನು ವಿರೋಧಿಸಿದರು. ಆದರೂ ಈ ಗೊತ್ತುವಳಿ ಬಹುಮತದಿಂದ ಸ್ವೀಕೃತವಾಯಿತು. ಈ ಗೊತ್ತುವಳಿಯ "ಅಸಮರ್ಪಕತೆ" ಯನ್ನು ಲಕ್ಷಿಸಿ ರಶಿಯನ್ ಪ್ರತಿನಿಧಿ ತನ್ನ ವಿಶೇಷಾಧಿಕಾರವನ್ನು ಉಪಯೋಗಿಸಿ ಅದನ್ನು ಉಪಸಂಹರಿಸುವದಾಗಿ ಸಾರಿದರು. ಈ ಪ್ರಕಾರ ಈ ಪ್ರಶ್ನೆಯ ತೀರ್ಮಾನವಾಗದೆ "ಇದ್ದಂತಿರೋ ಸಿದ್ದೇಶ್ವರಾ" ಆಗಿ ಮುಕ್ತಾಯಗೊಂಡಿತು.

ಇದು ತೀರ್ಮಾನವಾಗದೆ ಭದ್ರತಾ ಮಂಡಲ ಮುಕ್ತಾಯಗೊಂಡರೂ ಈ ಪ್ರಶ್ನೆಯಿಂದ ಉದ್ಭೂತವಾದ ಸುಯಿಲಿನ ಪರಿಣಾಮವಾಗಿ ಆಂಗ್ಲೋ—ಫ್ರೆಂಚ ಸೈನ್ಯಗಳನ್ನು ಸೀರಿಯಾ ಲೆಬನಾನಗಳಿಂದ ಹಿಂತೆಗೆಯುವ ಬಗ್ಗೆ ಉಭಯತರ ನಡುವೆ ಮಾತುಕತೆ ಪ್ರಾರಂಭವಾಗಿದೆಯೆಂದು ಇದೀಗ ಸುದ್ದಿ ಬಂದಿದೆ. ಭದ್ರತಾ ಮಂಡಲದ ಸಭೆ ಮುಕ್ತಾಯವಾಗಿ ಮಾರ್ಚ ೨೧ಕ್ಕೆ ಬಹುಶಃ ವಾಶಿಂಗಟನ್ನದಲ್ಲಿ ಸೇರುವದು.

## ಸಂಪಿನ ಕಾಯಿದೆ

೧೯೨೭ರಲ್ಲಿ ಬ್ರಿಟಿಶ ಪಾರ್ಲಮೆಂಟು ಇಂಗ್ಲಂಡಿನಲ್ಲಿ ಸಾರ್ವತ್ರಿಕ ಸಂಪುಗಳನ್ನು ಶಾಸನ ವಿರುದ್ಧವಾಗಿ ಮಾಡುವ ಕಾಯದೆ ಮಾಡಿದ್ದನ್ನು ಇದೀಗ ಬ್ರಿಟಿಶ ಕೂಲಿಕಾರ ಸರಕಾರ ಕಾಯದೆ ಪುಸ್ತಕದಿಂದ ಕಿತ್ತು ಹಾಕಬೇಕೆಂದು ಮಸೂದೆ ತಂದಿದೆ. ೧೯೨೬ರಲ್ಲಿ ಬ್ರಿಟಿಶ ಕೂಲಿಕಾರರು ಸಾರ್ವತ್ರಿಕ ಸಂಪು ಹೂಡಿ ಸರಕಾರವನ್ನು ಕಂಗೆಡಿಸಿ ಕೊನೆಗೆ ಸೋತರು. ಆ ಮೇಲೆ ಆಗಿನ ಕನ್ಸರ್ವೆಟಿವ ಸರಕಾರ ಸಾರ್ವತ್ರಿಕ ಸಂಪನ್ನೇ ಶಾಸನಬಾಹ್ಯ ಮಾಡುವ ಕಾಯಿದೆ ಮಾಡಿತ್ತು. ಇದರನ್ವಯ ಸಹಾನುಭೂತಿಪರ ಸಂಪು, ರಾಜಕೀಯ ಸಂಪು, ನಿಯಮಬಾಹ್ಯವಾಗಿದ್ದವಲ್ಲದೆ ಸರಕಾರಿ ನೌಕರರು ಕೂಲಿಕಾರ ಸಂಘಗಳಲ್ಲಿ ಸೇರಲು ಅಪ್ಪಣೆಯಿರಲಿಲ್ಲ. ಈಗ ಈ ಕಾಯದೆಯನ್ನು ಹಿಂತೆಗೆಯುವದರಿಂದ ಸಂಪನ್ನು ರಾಜಕೀಯ ಆಯುಧವಾಗಿ ಉಪಯೋಗಿಸಿ ಪಾರ್ಲಮೆಂಟಿನ ಅಧಿಕಾರಕ್ಕೆ ಸಂಚಕಾರ ತರುವ ಅವಕಾಶ ಕೊಟ್ಟಂತಾಗುವದೆಂದು ಕಾನ್ಸರ್ವೇಟಿವರು ಇದಕ್ಕೆ ಪ್ರಚಂಡ ವಿರೋಧವೊಡ್ಡಿದರೂ ಮಸೂದೆ ಎರಡು ಓದುಗಳನ್ನು ಮುಗಿಸಿ ಬೇಗನೆ ಕಾಯಿದೆಯಾಗುವ ಲಕ್ಷಣ ತೋರಿಸುತ್ತಿದೆ.

## ಮಂತ್ರಿಮಂಡಲ ಬದಲಾವಣೆ?

ಕಳೆದ ಜುಲೈಯಲ್ಲಿ ಅಧಿಕಾರಾರೂಢವಾದ ಬ್ರಿಟಿಶ ಕೂಲಿಕಾರ ಸರಕಾರ ಈಗಾಗಲೆ ಕೆಲ ಬಿರುಕುಗಳನ್ನು ತೋರಿಸುತ್ತಿದೆಯೆಂದೂ ವಸತಿ ನಿರ್ಮಾಣ ಮಂತ್ರಿ ಬೇವನ್ನರೂ ಆಹಾರ ಮಂತ್ರಿ ಸರ್ ಬೆನ್ ಸ್ಮಿಥರೂ ವಿರೋಧಿ ಪಕ್ಷದ ಅಗ್ರಹಕ್ಕೊಳಗಾಗಿರುವರಲ್ಲದೆ, ಅವರ ಕೈಯಲ್ಲಿ "ಬಹಳ ಕೆಲಸ" ರಾಶಿ ಬಿದ್ದಿರುವದರಿಂದ ಆ ಶಾಖೆಗಳಲ್ಲಿ ಬದಲಾವಣೆಗಳಾಗುವ ಸಂಭವವುಂಟೆಂದೂ ಸುದ್ದಿಗಳಿದ್ದಿವೆ. ಆಹಾರ ನೀಡಾ ಕಡಿಮೆ ಮಾಡಿದ್ದರಿಂದ ಬ್ರಿಟಿಶ ಗೃಹಿಣಿಯರು ಸ್ಮಿಥರ ಮೇಲೆ ಸಿಟ್ಟಿಗೆದ್ದು ಪತ್ರಗಳನ್ನು ಬರೆಯುತ್ತಿದ್ದಾರಂತೆ!

ಆದರೆ ಇದಕ್ಕಿಂತಲೂ ವಿಶೇಷ ವಾರ್ತೆಯೊಂದು ಹಬ್ಬಿದೆ. ಕೂಲಿಕಾರ ಸರಕಾರ ತಾನೇ ತಾನಾಗಿ ಸರಕಾರ ನಡೆಸಿಕೊಂಡು ಹೋಗಲು ಅಸಮರ್ಥವಾಗಿದೆ; ಅದು ಕಾನ್ಸರ್ವೇಟಿವರೊಡನೆ ಬೇಗನೆ ಸಂಯುಕ್ತ ಮಂತ್ರಿಮಂಡಲ ಸ್ಥಾಪಿಸಬಹುದು—ಎಂದು. ಈಚೆಗೆ ಒಂದು ಹೇಳಿಕೆಯಲ್ಲಿ ಬೇವಿನ್ನರು "ಅಮೇರಿಕೆಯಿಂದ ಅಪೇಕ್ಷಿತ ಸಾಲವನ್ನು ಪಡೆಯಲು ಬ್ರಿಟಿಶ ಸರಕಾರ ಅಸಮರ್ಥವಾದರೆ ರಾಷ್ಟ್ರೀಯ ಕೇಂದ್ರೀಕರಣದ ಸಂಯುಕ್ತ ಸರಕಾರ ಸ್ಥಾಪಿಸಬೇಕಾದೀತು" ಎಂದು ಹೇಳಿದ್ದೇ ಈ ಊಹೆಗೆ ಕಾರಣ. ಆದರೆ ಅಮೇರಿಕೆ ಸಾಲವನ್ನು ನಿರಾಕರಿಸಬಹುದೆಂದು ಹೇಳಲು ಕಾರಣವಿಲ್ಲ.

## ಇಜಿಪ್ತದಲ್ಲಿ ಹೊಸ ಮಂತ್ರಿಮಂಡಲ

ನೊಕ್ರಾಸಿ ಪಾಶಾರ ಇಜಿಪ್ಶಿಯನ್ ಮಂತ್ರಿಮಂಡಲದಲ್ಲಿ ಉಂಟಾದ ಭಿನ್ನಾಭಿಪ್ರಾಯಗಳು ಬಿಗಿದು ಕೊಟ್ಲ ಪಕ್ಷದ ಆರ್ಥಿಕ ಮಂತ್ರಿ ಮಕ್ರಾಮ ಪಾಶಾ ಮತ್ತು ಇನ್ನಿಬ್ಬರು ಮಂತ್ರಿಗಳ ರಾಜೀನಾಮೆಯೊಡನೆ ನೊಕ್ರಾಸಿ ಪಾಶಾರ ಅಧಃಪಾತವೂ ಆಯಿತು. ಅರಸ ಫರೂಕರು ಈಗ ಹೊಸ ಮಂತ್ರಿಮಂಡಲ ರಚಿಸುವ ಅಧಿಕಾರವನ್ನೊಪ್ಪಿಸಿದ ಸಿದ್ದಿಕಿ ಪಾಶಾ ಅವರು ೧೯೩೬ ರಲ್ಲಿ ಆಂಗ್ಲೋ ಇಜಿಪ್ಶಿಯನ್ ಒಪ್ಪಂದವನ್ನು ಸಂಧಾನ ಮಾಡಿದ ನಿಷ್ಟಮಂಡಲದ ಸದಸ್ಯರಲ್ಲೊಬ್ಬರು. "ಇಜಿಪ್ತದ ಸ್ವಾತಂತ್ರ್ಯವನ್ನು ಪೂರ್ಣಗೊಳಿಸುವ" ಪ್ರಯತ್ನ ಮಾಡುವ ಆಶ್ವಾಸನೆಯೊಡನೆ ಸಿದ್ದೀಕಿಯವರ ೧೧ ಜನರ ಮಂತ್ರಿಮಂಡಲ ಅಧಿಕಾರಕ್ಕೆ ಬಂದಿದೆ.

ತೀವ್ರಗಾಮಿ ವಿದ್ಯಾರ್ಥಿಗಳು ಇಜಿಪ್ತದಲ್ಲಿ ಪ್ರಚಂಡ ಚಳವಳಿಯನ್ನು ಕೈಕೊಂಡಿದ್ದಾರೆ. ಬ್ರಿಟಿಶ ವಿರೋಧೀ ಪ್ರದರ್ಶನಗಳು ದಿನದಿನವೂ ಎಂಬಂತೆ ನಡೆಯುತ್ತಿವೆ. ಕಾಯರೋದ ಮಧ್ಯಭಾಗದಲ್ಲಿ ೭೦೦೦ ವಿದ್ಯಾರ್ಥಿಗಳು "ಬ್ರಿಟಿಶ ಸೈನ್ಯ ಹೊರಟುಹೋಗಬೇಕು, ಇಲ್ಲದಿದ್ದರೆ ಬಂಡಾಯ" ಎಂದು ಘೋಷಿಸುತ್ತ (ತಾ. ೧೭) ಕೂಚು ಮಾಡಿದರು. "ಬ್ರಿಟಿಶರು ಹಾಳಾಗಿಹೋಗಲಿ! ಬೆವಿನ್ನರು ಹಾಳಾಗಿಹೋಗಲಿ!" ಎಂಬ ಘೋಷಣೆಗಳು ಗಗನದಲ್ಲಿ ಪ್ರತಿಧ್ವನಿಸುತ್ತಿದ್ದವು. ಪೋಲೀಸರು ಎಲ್ಲ ಸನ್ನಾಹ ಮಾಡಿದ್ದರೂ ಪ್ರದರ್ಶನದಲ್ಲಿ ಕೈ ಹಾಕಲಿಲ್ಲ.

೧೯೩೬ ರಲ್ಲಿ ಆದ ಆಂಗ್ಲೋ—ಇಜಿಪ್ಶಿಯನ್ ಒಪ್ಪಂದವನ್ನು ಕೊನೆಗೊಳಿಸಿ ಪೂರ್ಣ ಸ್ವಾತಂತ್ರ್ಯವನ್ನು ಕಸಿದುಕೊಳ್ಳಬೇಕೆಂದು ವಫ್ದ ಪಕ್ಷವೂ ಚಳವಳಿ ನಡೆಸಿದೆ.

## ರಾಜಸತ್ತೆಯ ಕರೆ!

೪೫೮ ಸ್ಪೇನಿಶ ಜನರು—೨೦ ಹಿಂದಿನ ಮಂತ್ರಿಗಳು, ಅನೇಕ ವಿಶ್ವವಿದ್ಯಾಲಯ ಪಂಡಿತರು ಮತ್ತು ರಾಜಕಾರಣಿಗಳು— ಲಿಸ್ಬನ್ (ಪೋರ್ತುಗಾಲ)ದಲ್ಲಿ ಬಂದಿಳಿದ ಸ್ಪೇನದ ರಾಜಪದಾಕಾಂಕ್ಷಿ

—೬ ನೇ ಪುಟ ನೋಡಿರಿ



ಮಹಾತ್ಮರೊಡನೆ ಶಿಷ್ಟರು:—ಪಾರ್ಲಮೆಂಟರಿ ಶಿಷ್ಟಮಂಡಲದ ಸದಸ್ಯರು ಕಳೆದ ತಿಂಗಳು ಮದ್ರಾಸಿನಲ್ಲಿ ಮಹಾತ್ಮರನ್ನು ಭೆಟ್ಟಿಯಾದಾಗ

## ಅಂತರ್‌ರಾಷ್ಟ್ರೀಯ

(ಐನೇ ಪುಟದಿಂದ ಮುಂದರಿದುದು)

ಡಾನ್ ಜುವಾನನಿಗೆ ಒಂದು ಬಿನ್ನವತ್ತಳೆ ಅರ್ಪಿಸಿದರು. ಸ್ಪೇನಕ್ಕೆ ರಾಜ್ಯಸತ್ತೆಯೇ ಯೋಗ್ಯವಾದ ರಾಜ್ಯಪದ್ಧತಿ, ಡಾನ್ ಜುವಾನರು ಬಂದು ಅರಸುಪಟ್ಟವನ್ನು ಅಂಗೀಕರಿಸಬೇಕು ಎಂದು "ಮಹಾಪ್ರಭು ಮುಮ್ಮಡಿ ಡಾನ್ ಜುವಾನ್" ಎಂದ ರಾಜೋಚಿತ ಒಕ್ಕಣೆಗಳಿಂದ ವಿಶಿಷ್ಟವಾದ ಆ ಬಿನ್ನವತ್ತಳೆ ಬಿನ್ನವಿಸಿತ್ತು.

ಜನರಲ್ ಫ್ರಾಂಕೋ ರಾಜಸತ್ತೆ ಬರುವದಾದರೆ ಅಧಿಕಾರತ್ಯಾಗ ಮಾಡಲು ಸಿದ್ಧನಾಗುವನೆಂಬ ಪ್ರತೀತಿ ಹರಡಿತ್ತು. ಆದರೆ ಈ ಬಿನ್ನವತ್ತಳೆಗಾರರ ಮೇಲೆ ಅವನು ಕೈಕೊಂಡ ಕ್ರಮಗಳಿಂದ ರಾಜಸತ್ತಾವಾದಿಗಳ ಆಸೆ ಧೂಳಿನೊಡನೆ ಹಾರಿಹೋಗಿರಬೇಕು. ಅದಕ್ಕೆ ಸಹಿ ಮಾಡಿದ ಡಚೆಸ್ ಆಫ್ ಮಾದಿನಾ (ಮಾದಿನಾದ ರಾಜಕುಮಾರಿ)ಗೆ ೧೦ ಸಾವಿರ ಪೌಂಡುಗಳ ದಂಡ ವಿಧಿಸಲ್ಪಟ್ಟಿತು. ಶಿಕ್ಷಣ ಖಾತೆಯು ಒಂದು ವಿಶೇಷಾಜ್ಞೆ ಹೊರಟು ವಿಶ್ವವಿದ್ಯಾಲಯಗಳ ಅನೇಕ ಶಿಕ್ಷಕರು ಮತ್ತು ಅಧಿಕಾರಿಗಳನ್ನು ಅದೇ ಅಪರಾಧಕ್ಕಾಗಿ ಒಮ್ಮಿಂದೊಮ್ಮೆ ಕೆಲಸದಿಂದ ತಳ್ಳಿಹಾಕಲಾಯಿತು.

### ಪಾಲಿಸ್ತಾನ ವಿಚಾರಣಾ ಸಮಿತಿ

ಪಾಲಿಸ್ತಾನ ಪರಿಸ್ಥಿತಿಯನ್ನು ವಿಚಾರಣೆ ಮಾಡಿ ಯಹೂದ್ಯ ಅರಬ ಸಂಘ್ಷಕ್ಕೆ ಪರಿಹಾರವನ್ನು ಸೂಚಿಸಲು ನಿಯಮಿಸಲ್ಪಟ್ಟ ಅಂಗ್ಲೋ-ಅಮೇರಿಕನ್ ಸಮಿತಿ ಇದೀಗ ವಿಚಾರಣಾಸತ್ರಕ್ಕೆ ಹೊರಟಿದೆ. ಮೊಟ್ಟಮೊದಲು ಅದು ವಿಯೆನ್ನಾಕ್ಕೆ (ಆಸ್ಟ್ರೀಯಾ) ಭೆಟ್ಟಿಯಿತ್ತು ಅಲ್ಲಿಯ ಯಹೂದ್ಯ ಸಂಸ್ಥೆಯೊಡನೆ ವಿಚಾರವಿನಿಮಯ ಮಾಡಿತು. ಪಾಲಿಸ್ತಾನಕ್ಕೆ ಅದು ಮುಟ್ಟಿದಾಗ ಅರಬ ಲೀಗದ ಕಾರ್ಯದರ್ಶಿ ಅಝಾಂ ಬೇ ಮತ್ತು ಯಹೂದ್ಯ ಮಂಡಲದ ಪ್ರಮುಖರು ಅದರ ಮುಂದೆ ಸಾಕ್ಷ್ಯ ಹೇಳಲು ನಿರ್ಧರಿಸಿದ್ದಾರೆ.

### ಇರಾಣದ ಪ್ರಧಾನಿ ಮಾಸ್ಕೋದಲ್ಲಿ

ಶುಭ ಮುಹೂರ್ತದಲ್ಲಿ, ಇರಾಣೀ ಮಜ್ಲಿಸ್ (ಪಾರ್ಲಮೆಂಟ) ದ ಶುಭಾಶಯ ಪಡೆದು ಹೊಸ ಇರಾಣೀ ಮಂತ್ರಿಮಂಡಲದ ಪ್ರಧಾನಿ ಸುಲ್ತಾನೆಯವರು, ದಂಡನಾಯಕ ಸ್ಟಾಲಿನ್ನರ ಆಮಂತ್ರಣವನ್ನು ಅಂಗೀಕರಿಸಿ, ಇರಾಣ-ರಶಿಯಾ ಮಾತುಕತೆಗಾಗಿ ಮಾಸ್ಕೋಕ್ಕೆ ವಿಮಾನ ಮೂಲಕ ಬಂದಿಳಿದಿದ್ದಾರೆ. ವಿದೇಶ ಮಂತ್ರಿ ಮೊಲಟೊವರು ಅವರನ್ನು ಪ್ರೇಮದಿಂದ ಬರಮಾಡಿಕೊಂಡರು.

ಇತ್ತ ಇರಾಣದಲ್ಲಿ ಮಾರ್ಚ ೨ರೊಳಗೆ ಹೊರಟುಹೋಗಬೇಕಾಗಿರುವ ಸೋವಿಯೆಟ್ ಸೈನಿಕರು ಸಾವಧಾನವಾಗಿ ಗಂಟುಮೂಟೆ ಕಟ್ಟುತ್ತಿದ್ದಾರೆ. ಅವರು ತಮ್ಮಲ್ಲಿರುವ ಉಗ್ರಾಣಗಳನ್ನು ಮಾರಲು ಆರಂಭಿಸಿದ್ದಾರೆ.

ಇರಾಣದ "ಅತ್ಯಂತ ಹಿತೈಷಿ ರಾಷ್ಟ್ರದ ರಾಜಧಾನಿಯಲ್ಲಿ ಬಂದು ಸೇರಲು ಆನಂದವಾಗುತ್ತದೆ" ಎಂದು ಮಾಸ್ಕೋದಲ್ಲಿಳಿದೊಡನೆ ಹೇಳಿದ ಸುಲ್ತಾನೆಯವರು ಸೋವಿಯಟ್ಟರೊಡನೆ ಏನು ಮಾತುಕತೆ ನಡೆಸುವರೆಂದಿನ್ನೂ ಗೊತ್ತಾಗಿಲ್ಲ. ಅಝುರಬೈಜಾನ ಪ್ರಶ್ನೆಯನ್ನಂತೂ ಚರ್ಚಿಸಲು ರಶಿಯನ್ನರು ಇಚ್ಛಿಸಲಿಕ್ಕಿಲ್ಲ. ಅದು "ಆಂತರಿಕ ಪ್ರಶ್ನೆ" ಎಂದು ಅಝುರಬೈಜಾನದ "ಮುಖ್ಯ ಮಂತ್ರಿ" ಜಾಫರ ಪಿಶೇವಾರಿಯವರೊಡನೆಯೇ ಸಂಧಾನ ಮಾಡಲು ಅವರು ಸೂಚಿಸಬಹುದು.

### ಅಟಂ ಗುಟ್ಟು ರಟ್ಟಾಯಿತು ?

ಕಾನಡಾ, ಸಂಯುಕ್ತ ಸಂಸ್ಥಾನ ಅಮೇರಿಕಾ—ಏಕೆ ಇಡಿ ಜಗತ್ತನ್ನೇ ಕ್ಷೋಭೆಯಲ್ಲಿ ಕೆಡಹಿದ ಕೆಲವೊಂದು ಸಂಗತಿಗಳು ಕಾನಡಾದಲ್ಲಿ ಈ ವಾರ ಬೆಳಕಿಗೆ ಬಂದವು. ಆಂಗ್ಲೋ—ಅಮೇರಿಕನ್ನರ ಹೃದಯದೊಳಗಿನ ಗುಟ್ಟಾದ ಪರಮಾಣು ಬಾಂಬಿನ ಗೋಪ್ಯಗಳನ್ನು ಸಂಪಾದಿಸಲು "ವಿದೇಶೀ ರಾಷ್ಟ್ರ"ವೊಂದು ಹೂಡಿದ ಪ್ರಚಂಡ ಒಳಸಂಚೊಂದರಲ್ಲಿ ಜ್ಞಾತಾಜ್ಞಾತವಾಗಿ ಸೇರಿಕೊಂಡಿದ್ದ ಹತ್ತುಗಟ್ಟಲೆ ಅಧಿಕಾರಿಗಳನ್ನು ಕೆನೇಡಿಯನ್ ಸರಕಾರ ಬಂಧಿಸಿದೆ. ಈ "ವಿದೇಶೀ ರಾಷ್ಟ್ರ" ವೆಂದರೆ ಸೋವಿಯೆಟ್ ರಶಿಯಾವೇ ಹೊರತು ಬೇರಲ್ಲವೆಂದು ಅಧಿಕೃತವಲ್ಲದಿದ್ದರೂ ಅಧಿಕಾರಿ ವರ್ಗದ ಹೇಳಿಕೆ. ಪರಮಾಣು ಸ್ಫೋಟದ ಗೋಪ್ಯವನ್ನು ಆಂಗ್ಲೋ—ಅಮೇರಿಕನ್ "ಬಡಾಭಾಯಿ"ಗಳೊಡನೆ ಕೆನಡಾ "ಛೋಟಾಭಾಯಿ"ಯೂ ಅರಿತಿದ್ದನೆಂದು ಓದುಗರು ಸ್ಮರಿಸಿಕೊಳ್ಳಬಹುದು. ಈ ಒಳಸಂಚು ಎಷ್ಟು ವಿಶಾಲವಾಗಿದೆಯೆಂದರೆ, ಬೇಗನೇ ಅನೇಕ ಸಂಯುಕ್ತ ಅಮೇರಿಕಾ ಅಧಿಕಾರಿಗಳ ಬಂಧನವೂ ಆಗಬಹುದು.

ಕಾನಡಾದಲ್ಲಿದ್ದ ರಶಿಯನ್ ರಾಯಭಾರಿಯನ್ನು ವಿಚಾರಿಸೋಣವೆಂದರೆ ಅವನು ವರದಿಗಾಗಿ ಮಾಸ್ಕೋಕ್ಕೆ ತೆರಳಿದ್ದಾನೆ. ಇತರ ರಾಯಭಾರಾಧಿಕಾರಿಗಳು "ನಾವರಿಯೆವು" ಎನ್ನುತ್ತಾರೆ. ಈ ಗುಪ್ತಚಾರ ಒಳಸಂಚಿನ ಪೂರ್ಣ ವಿವರಗಳು ಗೊತ್ತಾದಾಗ ರಶಿಯಾದೊಡನೆ ರಾಯಭಾರ ಸಂಬಂಧವನ್ನು ಕಾನಡಾ ಕಡಿದುಕೊಂಡೀತು ಮತ್ತು ಯುಕ್ತರಾಷ್ಟ್ರ ಭದ್ರತಾ ಮಂಡಲದ ಮುಂದೆಯೂ ಕಾನಡಾ ದೂರು ಕೊಡಬಹುದು ಎಂದು ನಂಬಲಾಗಿದೆ.

ಅಟಂ ಸ್ಫೋಟದ ಗುಟ್ಟು ಇನ್ನೂ ಅಮೇರಿಕೆಯ ಕೈಯಲ್ಲಿಯೇ ಇದೆಯೆಂಬ "ಆಸೆ" ಯನ್ನು ವಿದೇಶಖಾತೆಯ ಅಧಿಕಾರಿಯೊಬ್ಬ ವ್ಯಕ್ತಗೊಳಿಸಿದ. ಯಾರಿಗೆ ಗೊತ್ತು, ಅದು ಇಷ್ಟರಲ್ಲೇ ರಶಿಯನ್ನರ ಜೇಬು ಸೇರಿರಲೂಬಹುದು.

ಈ ಒಳಸಂಚಿನ ಸೂತ್ರ ಹೇಗೆ ಹೊರಬಿತ್ತೆಂದು ಯಾರೂ ಹೇಳಲೊಲ್ಲರು. ಯಾರೋ ಒಬ್ಬ ಸೋವಿಯೆಟ್ ಗೂಢಚಾರನನ್ನು ಶಿಸ್ತುಭಂಗದ ಆರೋಪಕ್ಕಾಗಿ ಶಿಕ್ಷಿಸಲು ರಶಿಯಾಕ್ಕೆ "ರವಾನೆ" ಮಾಡುವ ಏರ್ಪಾಡು ನಡೆದಾಗ ಆ ಮನುಷ್ಯ ರಶಿಯನ್ನರಮೇಲೆ ಮುಯ್ಯಿ ತೀರಿಸಲು ಈ ಗುಟ್ಟನ್ನು ಬಯಲಿಗೆಳೆದನೆಂದು ಹೇಳಲಾಗಿದೆ.

---

ಸಮಾಜದ ಸ್ತಂಭಗಳು

## ನರಸಬಾಯಿ ಎಸ್. ಡಿ. ಎನ್. ಎ.

ಲೆ— ವೆಂಕಣ್ಣಾಚಾರ್ಯ ಪಪ್ಪು ಬಿ. ಎ., ಎಲ್‌ಎಲ್. ಬಿ. ವಕೀಲ, ಹುಬ್ಬಳ್ಳಿ.

ನರಸಬಾಯಿಯನ್ನು ನೋಡದವರೇ ಇಲ್ಲ. ಹುಟ್ಟುವ ಹಸುಕೂಸುಗಳು ತಮ್ಮ ಮೊದಲನೇ ದೃಷ್ಟಿಯನ್ನು ಒಗೆಯುವದು ಅವಳ ಮೇಲೆಯೇ. ಅವಳೊರ್ವ ಸಮಾಜದಾಸಿ ದೇವದಾಸಿಯಲ್ಲ ಮಜಾದಾಸಿಯೂ ಅಲ್ಲ. 'ಸ' ಕೂಡಿಸಿ ಓದತಕ್ಕದ್ದು.

ನರಸಬಾಯಿ ಇಲ್ಲದೆ ಬಾಳಿದ ನಮ್ಮ ನಾಡಿಗೆ 'ನರ್ಸಿ'ನ ಅವಶ್ಯಕತೆಯೇನು ? ತಡೆಯಿರಿ! ನಮ್ಮ ನಾಡಿನಲ್ಲಿ 'ನರ್ಸ'ರು ಇದ್ದಿಲ್ಲವೆಂತಲ್ಲ. ಬೇರೆ ಹೆಸರಿನಿಂದಿದ್ದರು. ಸೂಲಗಿತ್ತಿಯರು– ಸೂಲಗಿತ್ತಿಯರಲ್ಲ— ಇದ್ದಿಲ್ಲವೇ? ಗಿತ್ತಿಯಿಂದ ಮುಗಿಯುವ ಅಂದರೆ ಗಿತ್ತ್ಯಂತ ಶಬ್ದಗಳೆಲ್ಲ ಅಪಮಾನ ವಾಚಕ ಅಥವಾ ಅವಮಾನಸೂಚಕವೆಂದು ಭಾವಿಸಬೇಡಿ.

ಪುರಾಣಕಾಲದ ಮಾತು ಬಿಟ್ಟುಬಿಡಿರಿ. ಈಗ ನಮ್ಮ ಮೂಗಿನೆದುರಿಗೆ ನಡೆದದ್ದನ್ನೆ ತೆಗೆದುಕೊಳ್ಳೋಣ. ನಾವು ರಾಜನಿಷ್ಠರಿದ್ದಾಗ್ಗೆ ನಮ್ಮ ಶಹರದ ಬೀದಿಗಳಿಗೆ ವಿಲಾಯಿತಿ ರಾಜಮಾನ್ಯರ ಹೆಸರುಗಳನ್ನು ಇಟ್ಟಿದ್ದೆವು. ಈಗ ಅವುಗಳನ್ನಳಿಸಿ ಅಗಪ್ಪ ವೀರರ ಅಯನ್ನೆ ಧೀರರ ಹೆಸರುಗಳನ್ನಿಟ್ಟಿಲ್ಲವೇ? ಹಾಗೆ ಸೂಲಗಿತ್ತಿಯರಿಗೆ 'ನರ್ಸ' ಎಂಬುದೊಂದು ಬಿಳಿ ಛಾಯದ ಹೊಸ ಹೆಸರು.

ನರಸಬಾಯಿಯು ಒಂದು ಶುಶ್ರೂಷಿಕಾ ಪಥಕದವಳು, ಪಂಥದವಳು, ಸುಧಾರಿಸಿದವಳು. ನರ್ಸಿನ ಮಂಗನಿಗೆ ಕೆಲವು ಜಿಗಿತಗಳ ಮೇಲೆ ಪ್ರಭುತ್ವವಿದ್ದಂತೆ ಡಾಕ್ಟರ ಸಂಗಡ ಮಾತಾಡುವಾಗ್ಗೆ ಕಲಿತ ಮತ್ತು ಆಸ್ಪತ್ರಿಯಲ್ಲಿ ಮೇಲಿಂದಮೇಲೆ ಪ್ರಯೋಗಿಸಲ್ಪಡುವ ಕೆಲವು ವೈದ್ಯಕೀಯ ಆಂಗ್ಲ ಶಬ್ದಗಳ ಮೇಲೆ ಅವಳ ಪ್ರಭುತ್ವ. ನರ್ಸ ಆಗಲಿಕ್ಕೆ ಅರ್ಹತೆಯ ಅವಶ್ಯಕ ವಿದ್ಯೆಯಾವರೂ ಇಷ್ಟೇ.

ಅವಿವಾಹಿತಳುಳಿದು ಯಾವನಾದರೊಬ್ಬನನ್ನು ಪುಳಕಾಳಿಯ ಗಂಡನಾಗುವದನ್ನು ತಪ್ಪಿಸಿದ್ದಾಳೆ ಉಳಿದ ಹೆಂಗಸರಂತೆ ಪರಾವಲಂಬಿಯಾಕಾಗಬೇಕು? ಮಂಗಳಸೂತ್ರವಿಲ್ಲದೆ ಸೂಸುತ್ರ ಇದ್ದವಳು. ಸಮಾಜವು "ಬಸವಿ'' (Spinster) ಎಂದು ಅವಳನ್ನು ಕಡೆಗಣಿಸಿ ಬಹಿಷ್ಕೃತಳನ್ನಾಗಿ ಮಾಡಿ ಸಂಸಾರ ಸಾಗರವನ್ನು ಕಥೆ ಕಾದಂಬರಿಗಳಲ್ಲಿ ಕಾಣುವಂತೆ ಮಾಡಿದೆ. ಧರ್ಮಬಾಧಿತ ಸನಾತನಿಗಳು ಗುಡಿಗಳಲ್ಲಿಯ ದೇವರನ್ನು ಅವಳಿಗೆ ಮರೆಮಾಡಿದರೂ ಚಲನಚಿತ್ರದಲ್ಲಿ ದೇವರನ್ನು ಕಾಣುತ್ತಾಳೆ. ಭಕ್ತಿರಸಭರಿತವಾದ ಭಗವಂತನ ಗೀತಗಳನ್ನು ಆಕಾಶವಾಣಿಯಲ್ಲಿ ಕೇಳುತ್ತಾಳೆ.

ನಾಲ್ಕನೆಯ ಅಂತಿಸ್ತಿನ ಒಂದು ಕೋಣೆಯ ಮನೆ, ಏಕಾಕಿಯಾಗಿ ವಾಸಿಸುವ ಅವಳಿಗೆ ಇಡಿ ಜಗತ್ತು. ಗಡಿಯಾರದ ಮುಳ್ಳು ಅವೇ ತಾಸುಗಳ ಮೇಲೆ ಅದೇ ರೀತಿಯಿಂದ ಹಾದುಹೋಗುವಂತೆ ನರಸಬಾಯಿಯ ದಿನಚರಿ ಸಾಯಕಲ ಸ್ವಾರಳಾಗಿ ಆಸ್ಪತ್ರಿಗೆ ಹೊರಟಳೆಂದರೆ ರಸ್ತೆಯ ವಾತಾವರಣದಲ್ಲಿ ವಿದ್ಯುತ್‌ಸಂಚಾರವಾದಂತಾಗುತ್ತದೆ. ಈ ಮಿಂಚುವ ಮಿನುಗುವ ಮಹಿಳೆಯನ್ನು ನೋಡದ ಕಣ್ಣುಗಳೇ ಇಲ್ಲ ಜನರ ದೃಷ್ಟಿಯನ್ನು ತನ್ನೆಡೆಗೆ ಎಳೆದುಕೊಳ್ಳುವಷ್ಟು ಆಕರ್ಷಕ ವ್ಯಕ್ತಿತ್ವವು ಅವಳದು. ಅವಳ ಸ್ವೈರವೃತ್ತಿ ಸ್ವಚ್ಛಂದ ಇರುವಿಕೆ ಬಿಚ್ಚುಮನದ ನಡಾವಳಿ ಚುರುಕು ಚಲುವಿಕೆ ಮುಖದ ಮೇಲೆ ಸಹಜವಾಗಿ ಸುಳಿದಾಡುವ ಮುಗುಳ್ನಗೆನೋಡುಗರ ಮನ್ಮನಾಥಿಗೆ ವಿಸ್ಮಯಕಾರಣ ಕಾರಣಗಳಾಗಿವೆ. ಕೆಲವರಂತೂ ಚಲನಚಿತ್ರ ನಕ್ಷತ್ರವಾಗುವದಕ್ಕೆ "ನರ್ಸ"ಒಂದು ಸೋಪಾನವೊ ಅಥವಾ ಮೆಟ್ಟಲೋ ಎಂದು ಪ್ರಶ್ನಿಸುವರು.

ಬೀದಿಯಲ್ಲಿ ಕಾಣುವವರು ಪಾತ್ರಧಾರಿಗಳಾಗಿ ರಂಗಭೂಮಿಯನ್ನೇರಿದರೆ ಹೇಗೆ ಕಾಣುವರೊ ಹಾಗೆ ನರ್ಸಿನ ಸಮವಸ್ತ್ರ ಧರಿಸಿದ ಅವಳು ಆಸ್ಪತ್ರೆಯಲ್ಲಿ ಕಾಣುವಳು. ಬೆಳದಿಂಗಳಿಂದ ಮೈದೊಳೆದು ಬೆಂಡೆ ಬಣ್ಣದ ಡ್ರೆಸ್ ಧರಿಸಿರುವದರಿಂದ ಸರೋವರದಿಂದಗಲಿದ ಸಾಕ್ಷಾತ್ ಮಾನವಹಂಸವೊ ಅಥವಾ ಆಸ್ಪತ್ರಿಯ ಆ ಬಿಳಿ ಹಿನ್ನಲೆಯಲ್ಲಿ ಗಂಧರ್ವ ಕನ್ನಿಕೆಯೊ ? ತಿಳಿಯದ ಆಭರಣ ಭೂಷಣಗಳಿಂದಲೂ ಬಣ್ಣಬಣ್ಣದ ಸೀರೆಗಳಿಂದಲೂ ಹೆಂಗಸರು ಚೆಂದವೆಂದು ಅನ್ನುವವರಿಗೆ ಆಸ್ಪತ್ರೆಯ ಆ ಶುಭ್ರ ವಾತಾವರಣದಲ್ಲಿ ಮತ್ತು ಶುಭ್ರ ಉಡುಗೆಯಲ್ಲಿ ಅವಳನ್ನು ನೋಡಿದರೆ ಭ್ರಮನಿರಸನವಾಗುವದು. ಅವಳ ಒಂದೇ ಒಂದು ಆಭರಣವೆಂದರೆ ಕೈಗೆ ಕಟ್ಟಿಕೊಂಡ ಥಳಥಳ ಹೊಳೆಯುವ ಪೈ ಆಕಾರದ ಮುಂಗೈ ಗಡಿಯಾರು.

ಆಸ್ಪತ್ರೆಯ ನಿವಾಸಿಗಳಿಗೆ ಔಷಧಕ್ಕಿಂತಲೂ ಅವಳ ಮಂಜುಳವಾದ ದನಿಯೇ ಹಿತಕರವಾದ ಜೋಗುಳಪದ. ಮಂಚದಿಂದ ಮಂಚಕ್ಕೆ ನಾಗಮಣಿತದ ಅವಳ ಓಡಾಟವನ್ನು ಲಯಬದ್ಧವಾದ ಬ್ಯಾಲ್‌ಡಾನ್ಸಗೆ ಹೋಲಿಸಬಹುದು. ಒನಪು ವೈಯಾರಗಳಿಂದಲೂ ನೃತ್ಯ ನಮೂನೆಯ ಓಡಾಟದಿಂದಲೂ ತನ್ನ ತಾರುಣ್ಯವನ್ನು ಅಮರ ಮಾಡಿದ್ದಾಳೆ. ಶಿಸ್ತಿನಿಂದ ಕೆಲಸ ಮಾಡುವದರಲ್ಲಿಯೇ ವ್ಯಾಯಾಮ ಇದೆಯೆಂದು ಅವಳ ಇರುವಿಕೆಯಿಂದ ಪಾಠ ಕಲಿಯಬಹುದು. ರುಗ್ಣಾಲಯದ ಆವಾರದಲ್ಲಿ ಅವಳೆಂದರೆ ಕೆಸರಿನಲ್ಲಿ ಕಮಲವಿದ್ದಂತೆಯೆ !

ಈಗ ಕಾಲಿದಾಸನಿದ್ದರೆ( ? ) 'ರೆ' ಬೇಸರಿಯಬೇಡಿರಿ. ಆಧುನಿಕ ಸಾಮಾಜದ—ಗಂಡ ಹೆಂಡತಿ ಇಬ್ಬರ ಕುಟುಂಬ ಪದ್ಧತಿಯಲ್ಲಿ—ದೇಹಾಲಸ್ಯದ ವೇಳೆಯಲ್ಲಿ ಅವಶ್ಯಕ ವ್ಯಕ್ತಿಯಾದ ನರಸಬಾಯಿಯು ಕಾಲಿದಾಸನ ಕೈಯಲ್ಲಿ ಕಥಾವಸ್ತುವಾಗಿ ಒಂದು ಕಾವ್ಯವಾಗಬಹುದಾಗಿತ್ತು. ಆ ಕಾವ್ಯವನ್ನು ಓದುವವರು ಮಾತ್ರ ಸಿಗರು. ಈಗಿನ ನಿರುದ್ಯೋಗಿ ಜನರಿಗೆಕೂಡ ಕಾವ್ಯಗಳನ್ನು ಓದುವಷ್ಟು ತಾಳ್ಮೆಯೂ ಇಲ್ಲ, ವೇಳೆಯೂ ಇಲ್ಲ. ಹತ್ತು ನಿಮಿಷ ಟ್ರಾಂನಲ್ಲಿ ಕುಳಿತಾಗ ಮುಗಿಯುವಷ್ಟರಲ್ಲಿ ಮಹಾಕಾವ್ಯದ ಎರಕವನ್ನು ಹೊಯ್ದರೆ ಮಾತ್ರ ಓದುವರು.

ಸಂಗಮರವರಿ ಶಿಲೆಯಲ್ಲಿ ಕೆತ್ತಿ ತೆಗೆದ ಊರ್ವಶಿಯ ಮೂರ್ತಿಯಾಗಿದ್ದರೂ ಅವಿವಾಹಿತಳುಳಿದ, ಸಮಾಜದಿಂದ ಬಹಿಷ್ಕೃತಳಾಗಿದ್ದರೂ, ಬಹುಜನ ಸಂಪರ್ಕ ಬರುವ ನರ್ಸವೃತ್ತಿಯಲ್ಲಿದ್ದರೂ ನೇಮಿಸಿಕೊಂಡ ತಾರೀಖು ಕೆಲಸದಿಂದ ನಿವೃತ್ತವಾದ ತಾರೀಖು ಎರಡೇ ಎರಡು ತಾರೀಖುಗಳ ನಮೂದ ಇದ್ದ ಬಿನ್ ಭಾನಗಡಿಯ ಕಾರಕೂನನ ಸರ್ವಿಸ ಬುಕ್ಕ ಇದ್ದಂತೆ ಅವಳ ಇಂದಿನವರೆಗಿನ ಚರಿತ್ರ. ವೈಶಿಷ್ಟ್ಯವಿಲ್ಲದ ಈ ಚರಿತ್ರವನ್ನು ಯಾರೂ ಛಾಪಿಸಲಾರರು. ಆದ್ದರಿಂದ ಕಿಕ್ಕಿರಿದು ತುಂಬಿದ ಸಭೆಯಲ್ಲಿ ೫೦೧ ರೂಪಾಯಿ-ಬಹಾಣದ ನಂಬರಲ್ಲ—೫೦೦ ರೂಪಾಯಿಯ ನೋಟಿನಲ್ಲಿಯೂ ಅಲ್ಲ, ಹೆರಿಗೆಯ ಆಸ್ಪತ್ರೆಗಾಗಿ ದೇಣಗಿಯ ವಾಗ್ದಾನವನ್ನು ಮಾಡಿ ಬಿಲ್ಲೀ ದೈನಿಕದ ಒಂದು ಕಾಲಂನ ಚರಿತ್ರೆಗಾದರೂ ಅರ್ಹಳಾಗಲು ನಿರ್ಧರಿಸಿದ್ದಾಳೆ. ಗಳಿಕೆಯಲ್ಲಿಯ ಉಳಿಕೆಯಿಂದ ಬೆಳಕಿಗೆ ಬರುವ ಈ ರಾಜಮಾರ್ಗವನ್ನು ಹುಡುಕಿ ತೆಗೆದಿದ್ದಾಳೆ.

---

## ★ ಲಿಂಗ ಪರಿವರ್ತನ

೧೪ ವಯಸ್ಸಿನ ಬಂಗಾಲಿ ಹಳ್ಳಿಹುಡುಗನೊಬ್ಬ ಕಲಕತ್ತೆಯ ವೈದ್ಯಕೀಯ ಕಾಲೇಜಿನ ಆಸ್ಪತ್ರೆಯಲ್ಲಿ ಸೇರಿಸಿಕೊಳ್ಳಲ್ಪಟ್ಟಿದ್ದಾನೆ. ಅವನಿಗೆ ಜಡ್ಡಿಲ್ಲ. ಜ್ವರವಿಲ್ಲ. ಆದರೆ ಅವನ ದೂರು ಬೇರೆಯೆ. ಅವನಿಗೆ ಮೊಲೆಗಳು ಬೆಳೆಯಹತ್ತಿವೆ ಮತ್ತು ಜನನೇಂದ್ರಿಯ ಸಂಕುಚಿತವಾಗತೊಡಗಿದೆ. ಗಲ್ಲದಲ್ಲಿ ರೋಮದ ಚಿಹ್ನವೇ ಇಲ್ಲ.

ನದಿಯಾದ ಜಿಲ್ಲೆಯ ಈ ಹುಡುಗನಿಗೆ ತನ್ನ ಗತಿಯೇನೆಂದು ಘನಚಿಂತೆ ಹತ್ತಿದೆ.

ಕೆಲ ತಿಂಗಳ ಹಿಂದೆ ಅವನಿಗೆ ತನ್ನ ದೇಹದಲ್ಲಿ ವಿಚಿತ್ರ ಆವೇಗಗಳ ಅನುಭವವಾಗತೊಡಗಿತು. ಆಪಾದಮಸ್ತಕವೂ ತನ್ನೊಳಗೆ ಏನೊ ಒಂದು ಹರಿದಾಡುವಂತೆನಿಸಿತು. ಅವನ ಶಾಂತಿ, ಸಮಾಧಾನ, ವಿಶ್ರಾಂತಿ, ನಿದ್ರೆ ಎಲ್ಲ ಹಾರಿಹೋದವು. ತಾಳಲಾರದೆ ಆಸ್ಪತ್ರೆ ಸೇರಿದ.

ಪ್ರಾಥಮಿಕ ವೈದ್ಯಕೀಯ ಪರೀಕ್ಷೆಯಲ್ಲಿ, ಅವನ ಅಸ್ಥಿಪಂಜರ ಸ್ತ್ರೀಸದೃಶವಾದುದೆಂದು ಗೊತ್ತುಮಾಡಲ್ಪಟ್ಟಿತು. ಇದು ಹೊರತು ಲಿಂಗ ಪರಿವರ್ತನೆಗೆ ಬೇರೇನೂ ಕಾರಣ ಕಾಣಲಿಲ್ಲ. ಲಿಂಗ ಕ್ರಿಯೆಯನ್ನು ನಿಯಂತ್ರಿಸುವ ಮೇದೋಗ್ರಂಥಿಗಳಲ್ಲಿ ವೈಚಿತ್ರ್ಯವೇನೂ ಇರಲಿಲ್ಲ. ಮೂತ್ರದಲ್ಲಿನ ಬೀಜಾಣುಗಳಲ್ಲಿಯೂ ಭೇದವಿದ್ದಿಲ್ಲ. ಆದುದರಿಂದ ಶಸ್ತ್ರಕ್ರಿಯೆಯೇ ಅವನನ್ನು ಪೂರ್ವಸ್ಥಿತಿಗೆ ತರುವ ಉಪಾಯವೆಂದು ವೈದ್ಯರು ಅಭಿಪ್ರಾಯಪಡುತ್ತಾರೆ.

ಅವನನ್ನು ನೋಡಲು ಸಾವಿರಾರು ಸ್ತ್ರೀ ಪುರುಷರು ಆಸ್ಪತ್ರೆಗೆ ಬರುತ್ತಿದ್ದಾರೆ.

---

ಬೆಲ್ಜಿಯಮದಲ್ಲಿ ಕಳೆದ ಆದಿತ್ಯವಾರ ಚುನಾವಣೆಗಳು ಮುಗಿದು ಕೆಥೋಲಿಕ ಪಕ್ಷಕ್ಕೆ ಎಲ್ಲಕ್ಕೂ ಹೆಚ್ಚು ಸ್ಥಾನಗಳು ದೊರೆತವು. ಮಂತ್ರಿಮಂಡಲ ರಾಜೀನಾಮೆ ಕೊಟ್ಟಿದೆ.

---

ಅಂಚೆಯಿಂದ ತರಿಸಿಕೊಳ್ಳುವ ನಮ್ಮ

### ಚಂದಾದಾರರಲ್ಲಿ ವಿನಂತಿ

ಪತ್ರವ್ಯವಹಾರ ಮಾಡುವಾಗ್ಗೆ ಮತ್ತು ಮನಿಆರ್ಡರ ಕಳಿಸುವಾಗ್ಗೆ ನಿಮಗೆ ಬರುತ್ತಿದ್ದ ಪತ್ರಿಕೆಯ ಮೇಲಿನ ವಿಳಾಸದಲ್ಲಿ ನಾವು ಸೇರಿಸಿದ ನಂಬರ ಬರೆಯಬೇಕು. ನಂಬರ ಇಲ್ಲದ ಪತ್ರಕ್ಕೆ ಉತ್ತರ ಸಿಗಲಾರದು.

ಅವಧಿ ಮುಗಿಯುವ ೧೫ ದಿನ ಮುಂಚೆಯೆ ನಾವು ನಮ್ಮ ಪದ್ಧತಿಯಂತೆ ವ್ಹಿ. ಪಿ. ಮಾಡುವೆವು. ಬೇಡಾದವರು ಮೊದಲೇ ನಮಗೆ ತಿಳಿಸಬೇಕು.

ತಿಂಗಳು, ಎರಡು ತಿಂಗಳು ಚಂದಾದಾರರಾಗಲಿಚ್ಛಿಸುವವರು ಮುಂಗಡ ಹಣ ಕಳಿಸಬೇಕು. ಅವರಿಗೆ ವ್ಹಿ. ಪಿ. ಯನ್ನು ಕಳಿಸಲಾಗುವದಿಲ್ಲ. ವಾರಪತ್ರಿಕೆ (ಕರ್ಮವೀರ) ಯನ್ನು ೬ ತಿಂಗಳಿಗಿಂತ ಕಡಿಮೆ ವ್ಹಿ. ಪಿ. ಮಾಡುವದಿಲ್ಲ. ಮೊದಲನ ವ್ಹಿ. ಪಿ. ಕಳಿಸಿದ ಪ್ರತಿಯನ್ನು ನಾವು ಲೆಕ್ಕಕ್ಕೆ ಹಿಡಿಯದೆ ನಿಮ್ಮಿಂದ ವ್ಹಿ. ಪಿ. ಹಣ ಬಂದು ನಮ್ಮ ಕೈಸೇರಿದ ನಂತರ ಪತ್ರಿಕೆಯನ್ನು ಕಳಿಸಲು ಪ್ರಾರಂಭಿಸಿ ಅಂದಿನಿಂದಲೆ ನಿಮ್ಮ ಅವಧಿಯನ್ನು ಗಣಿಸಲಾಗುವದು.

—ವ್ಯವಸ್ಥಾಪಕ

ಕರ್ಮವೀರ, ಹುಬ್ಬಳ್ಳಿ.

ಕರ್ಮವೀರ

# ಹರಿಜನ  ಪುರವಣಿ

## ಟೀಕೆ ಟಿಪ್ಪಣೆಗಳು

### ದಯವಿಟ್ಟು ಗಮನಿಸಿರಿ

ನಾನು “ ಹರಿಜನ ” ದ ಪ್ರಕಟನ ಕಾರ್ಯವನ್ನು ನಮ್ಮ ದೇಶದ ಇತಿಹಾಸದ ಎಂಥ ಇಕ್ಕಟ್ಟಿನ ಸಂಧಿ ಕಾಲದಲ್ಲಿ ಕೈಕೊಂಡಿರುವೆನೆಂದರೆ, ಬರೆಯುವ ಹೊಣೆ ವಹಿಸಿಕೊಂಡ ನಂತರ ನನ್ನ ವಿಚಾರಗಳನ್ನು ಹೊರಗೆಡಹಲು ಕೆಲವೊಂದು ವಿಷಯದಲ್ಲಿ ಮುಂದಿನ “ ಹರಿಜನ ” ಸಂಚಿಕೆಯ ವರೆಗೆ ಕಾಯಲಾರದವನಾಗಿದ್ದೇನೆ. ಅದೂ ಅಲ್ಲದೆ “ ಹರಿಜನ ”ದ ಪ್ರಕಟನೆ ನಾನಿರುವ ಸ್ಥಳದಲ್ಲಿಯೇ ಆಗದೆ ದೂರದ ಜಾಗೆಯಿಂದ ಆಗುವದು. ಆದುದರಿಂದ “ ಹರಿಜನ ” ದಲ್ಲಿ ಬರುವ ಲೇಖಗಳು ಆ ಮೊದಲೇ ದಿನಪತ್ರಿಕೆಗಳಲ್ಲಿ ಪ್ರಸಿದ್ಧವಾಗಿದ್ದರೆ ನಿಷ್ಠುರರಾದ ವಾಚಕರು ನನ್ನನ್ನು ಕ್ಷಮಿಸಬೇಕು. ಪುನಃ ಪ್ರಕಟಿಸುವ ಕಾರಣ ವಿದಿತವೇ ಆಗಿದೆ. ನನ್ನ ಹೇಳಿಕೆಗಳನ್ನು ಪ್ರಕಟಿಸಿರಬಹುದಾದ ಪತ್ರಿಕೆಗಳನ್ನು ಓದದ ಹಲವು ಓದುಗರಲ್ಲಿಗೆ “ ಹರಿಜನ ” ಹೋಗುತ್ತದೆ. ಅದೂ ಅಲ್ಲದೆ ಪತ್ರಿಕೆಗಳಲ್ಲಿ ನನ್ನ ಹೇಳಿಕೆಗಳನ್ನು ಶುದ್ಧವಾಗಿ ಪ್ರಕಟಿಸುವರೆಂಬ ಭರವಸೆಯೂ ಇಲ್ಲ— “ ಹರಿಜನ ” ಪತ್ರಿಕೆ ವ್ಯಾಪಾರೀ ಸಂಸ್ಥೆಯಲ್ಲ— ಆ ಶಬ್ದದ ಯಾವದೇ ಅರ್ಥದಲ್ಲಿ ಕೂಡ. ಅದು ಕೇವಲ ಹಿಂದೀ ಸ್ವಾತಂತ್ರ್ಯ ಧ್ಯೇಯದ ಹಿತ ದೃಷ್ಟಿಯಿಂದ ಪ್ರಕಟವಾಗುತ್ತಿದೆ.

ಸೇವಾಗ್ರಾಮ --ಮೋ ಕ ಗಾಂಧಿ
೧೫—೨--೪೬

### ಸಾರ್ವಜನಿಕ ಕಾರ್ಯಕರ್ತರಿಗೆ ಹಮ್ಮಿಣಿಗಳು

ಸಾರ್ವಜನಿಕ ಕಾರ್ಯಕರ್ತನಿಗೆ ಅರ್ಪಿಸಲ್ಪಡುವ ಹಮ್ಮಿಣಿಗಳ ವಿಷಯದಲ್ಲಿ ಸ್ವಾರಸ್ಯವಾದೊಂದು ಸರ ಪ್ರಶ್ನೆಣ ನನ್ನ ಗಮನಕ್ಕೆ ಬಂದಿದೆ. ನಾನು ಸಾರ್ವಜನಿಕರಿಂದ ಅನೇಕ ಹಮ್ಮಿಣಿಗಳನ್ನು ಪಡೆಯುತ್ತಿರುತ್ತೇನೆ. ಹೀಗೆ ನನ್ನ ಈಚೆಗಿನ ಸಂಚಾರದಲ್ಲಿ ಕಲಕತ್ತೆಯಿಂದ ಮದುರೆಯ ವರೆಗೆ ನನಗೆ ಎರಡು ಲಕ್ಷ ರೂಪಾಯಿಗೂ ಮಿಕ್ಕಿದ ನಿಧಿಗಳು ಒಪ್ಪಿಸಲ್ಪಟ್ಟವು. ಅವುಗಳಲ್ಲಿ ಕೆಲವು ನಿರ್ದಿಷ್ಟ ಕಾರಣಗಳಿಗಾಗಿ ಮೀಸಲಾದವು ಮತ್ತು ಕೆಲ ದಾತೃಗಳು, ಅವರನ್ನು ಕೇಳಿದಾಗ, ನನಗೆ ಸರಿದೋರಿದಂತೆ ಉಪಯೋಗಿಸಿಕೊಳ್ಳಲು ಹೇಳಿದರು ನಾನು ನನ್ನದೆಂದು ಹೇಳಬಹುದಾದ ಯಾವ ಸೊತ್ತನ್ನೂ ಇಟ್ಟುಕೊಂಡಿಲ್ಲ, ನಾನು ಕಾಣಿಕೆಗಳನ್ನು ಅಥವಾ ಅವುಗಳಲ್ಲಿ ಕೆಲವಂಶವನ್ನು ನನ್ನ ಸ್ವಂತದ ಉಪಯೋಗಕ್ಕೆ ಬಳಸಬಹುದೆ ? ನನ್ನ ಇಡಿ ಕಾರ್ಯಾವಧಿಯಲ್ಲಿ ನಾನು ಹಾಗೆ ಬಳಸಿಲ್ಲ. ಇತರರಿಗೂ ಹಾಗೆಯೆ ಸಲಹೆ ಕೊಟ್ಟಿದ್ದೇನೆ. ಇದಲ್ಲದೆ ಬೇರಾವ ಮಾರ್ಗವೂ ಸಾರ್ವಜನಿಕರ ವಿಶ್ವಾಸಕ್ಕೆ ಪಾತ್ರರಾದವರಿಗಿಲ್ಲವೆಂದು ನನ್ನ ಅಭಿಮತ. ಏಕೆಂದರೆ ಈ ಪ್ರಕಾರ ನಿಧಿಗಳನ್ನು ಯಾವ ಕಾರ್ಯಕರ್ತರಿಗರ್ಪಿಸುವರೋ ಅವರು ತಮಗಿಂತ ಹೆಚ್ಚು ವಿವೇಕದಿಂದಲೂ ಜತನದಿಂದಲೂ ಯಾವದೊಂದು ಸಾರ್ವಜನಿಕ ಕಾರ್ಯಕ್ಕೆ ಉಪಯೋಗಿಸಬಲ್ಲರೆಂದು ಪೂರ್ಣವಾಗಿ ನಂಬಿ ದಾತೃಗಳು ನಿಧಿಗಳನ್ನು ಅರ್ಪಿಸುವರು. ಹೀಗೆ ಇಡಲಾದ ವಿಶ್ವಾಸವನ್ನು ದುರುಪಯೋಗಪಡಿಸಿ ಸ್ವಂತ ಉಪಯೋಗಕ್ಕೆ ನಿಧಿಗಳನ್ನು ಬಳಸುವದು ಭಯಾನಕ ಅಂಥ ಉಪಯೋಗದ ಸರ್ವನಾಶಕರ ಪರಿಣಾಮಗಳನ್ನು ಬಣ್ಣಿಸುವದಕ್ಕಿಂತ ಊಹಿಸುವದೆ ಮೇಲು. ಸಾರ್ವಜನಿಕ ಸೇವೆಯೆಂಬುದು ರಾಮ—ಪತ್ನಿಯಂತೆ ಸಂಶಯಾತೀತವಾಗಿರಬೇಕು.

ಮುಂಬಯಿ -ಮೋ. ಕ. ಗಾಂಧಿ
೧೯-೨-೪೬

### ೧೨೫ ವರ್ಷ ಬದುಕುವದು

೧೨೫ ವರ್ಷಗಳ ವರೆಗೆ ಬದುಕುವ ಇಚ್ಛೆಯನ್ನು ಕುರಿತು ನಾನು ಮಾತಾಡಿದಾಗ ಹಿಂದ ಮುಂದೆ ನೋಡದೆ ಮಾತಾಡಿಲ್ಲ. ಅದರ ಅರ್ಥ ಆಳವಾಗಿದೆ. ನನ್ನ ಇಚ್ಛೆಯ ಮೂಲ ಈಶೋಪನಿಷತ್ತಿನ ಮೂರನೆ ಮಂತ್ರದಲ್ಲಿದೆ. ನಿಷ್ಕಾಮ ಕರ್ಮದಲ್ಲಿ ಪ್ರಸಕ್ತನಾಗಿ ೧೦೦ ವರ್ಷ ಬಾಳಲು ಮನುಷ್ಯನು ಅಪೇಕ್ಷಿಸಬೇಕೆಂದು ಆ ಮಂತ್ರಕ್ಕೆ ಅಕ್ಷರಶಃ ಅರ್ಥವಾಗುತ್ತದೆ. ಆ ಉಪನಿಷತ್ತಿನ ಒಂದು ಭಾಷ್ಯದಲ್ಲಿ ೧೦೦ ಎಂದರೆ ನಿಜವಾಗಿ ೧೨೫ ಎಂದು ಅರ್ಥ ಹೇಳಿದ್ದುಂಟು. ಇಂದಿಗೂ ಮದ್ರಾಸಿನಲ್ಲಿ ನೂರು ಎಂಬ ಶಬ್ದಕ್ಕೆ ೧೧೬ ಎಂಬ ಅರ್ಥವೇ ಪ್ರಚಲಿತವಾಗಿದೆ. –ಮೊನ್ನೆ ಮೊನ್ನೆ ನನಗೆ ಮದ್ರಾಸಿನಲ್ಲಿ ನೂರು ರೂಪಾಯಿಗಳೆಂದು ಹೇಳಿ ನನಗೆ ಯಾರೊ ಒಬ್ಬರು ಕೊಟ್ಟ ಕಾಣಿಕೆಯಲ್ಲಿ ಎಣಿಸುವಾಗ ೧೧೬ ರೂಪಾಯಿ ಇದ್ದುದು ಕಂಡುಬಂತು– ನೂರು ಎಂದರೆ ೯೯ ಕ್ಕೆ ೧ ಕೂಡಿಸಿದಷ್ಟು ಎಂದು ನಮ್ಮ ದೇಶದಲ್ಲಿ ಏಕಮಾತ್ರ ಅರ್ಥ ಬಳಕೆಯಲ್ಲಿಲ್ಲ.

ಅದೆಂತೇ ಇರಲಿ, “ನೂರು” ಎಂಬ ಶಬ್ದದ ಅರ್ಥನಿರ್ಣಯ ನನ್ನ ವಾದಕ್ಕೆ ಅವಶ್ಯವಿಲ್ಲ. ನನ್ನ ಕೇವಲ ಉದ್ದೇಶವೆಂದರೆ ಈ ಉದ್ದೇಶಸಿದ್ಧಿಗೆ ಅವಶ್ಯವಾದ ಸ್ಥಿತಿಯನ್ನು ಸೂಚಿಸುವದು. ಆ ಸ್ಥಿತಿಯೆಂದರೆ ಅನಾಸಕ್ತಿಯೋಗ, ಅಂದರೆ ಕರ್ಮಫಲದಿಂದ ಸಂಪೂರ್ಣ ನಿರ್ಲಿಪ್ತಿ. ಅದಿಲ್ಲದೆ ಯಾರೂ ೧೨೫ ವರ್ಷ ಬಾಳಲು ಆಶಿಸಬಾರದು. ಆ ಮಂತ್ರಕ್ಕೆ ನಾನು ಮಾಡುವ ಅರ್ಥ ಇದು. ಆ ಅನಾಸಕ್ತ ಸ್ಥಿತಿಯ ಪ್ರಾಪ್ತಿಯಾದ ಹೊರತು ೧೨೫ ವರ್ಷ ಬಾಳುವದು ಅಸಾಧ್ಯವೆಂದು ನನ್ನ ನಿಸ್ಸಂಶಯವಾದ ನಂಬಿಕೆ. ಆ ವಯಸ್ಸಿನ ವರೆಗೆ ಬದುಕುವದೆಂದರೆ ಕೇವಲ ಸಾಯುವ ವರೆಗೆ ಬದುಕುವ ಜೀವನ, ಸಜೀವ ಶವಪ್ರಾಯವಾದ ಬಂಧುಬಳಗಕ್ಕೂ ಸಮಾಜಕ್ಕೂ ಭಾರವಾದ ಜೀವನ, ಎಂದು ಎಂದೂ ಅರ್ಥಮಾಡಬಾರದು. ಅಂಥ ಪರಿಸ್ಥಿತಿಯಲ್ಲಿ ಅಂಥವನ ಪರಮ ಕರ್ತವ್ಯವೆಂದರೆ ಬೇಗನೆ ಭವಬಂಧನದಿಂದ ಮುಕ್ತಮಾಡೆಂದು ದೇವರನ್ನು ಪ್ರಾರ್ಥಿಸುವದು ಹೊರತು ಹೇಗಾದರೂ ಜೀವನವನ್ನು ದೀರ್ಘಗೊಳಿಸೆಂದು ಬೇಡುವದಲ್ಲ.

ಮಾನವ ದೇಹ ಕೇವಲ ಸೇವೆಗಾಗಿ ಉದ್ದಿಷ್ಟವಾಗಿದೆ ಹೊರತು ಭೋಗಕ್ಕಾಗಿ ಅಲ್ಲವೇ ಅಲ್ಲ. ಸುಖಜೀವನದ ಒಳಗುಟ್ಟು ತ್ಯಾಗದಲ್ಲಿದೆ. ತ್ಯಾಗವೇ ಜೀವನ. ಭೋಗದಿಂದ ಮೃತ್ಯು ಸಿದ್ಧ. ಆದುದರಿಂದ ಫಲಾಪೇಕ್ಷೆಯಿಂದ ಮುಕ್ತವಾದ ಸೇವೆಯನ್ನು ಮಾಡುತ್ತ ೧೨೫ ವರ್ಷ ಬಾಳಬೇಕೆಂದು ಇಚ್ಛಿಸಲು ಎಲ್ಲರಿಗೂ ಅಧಿಕಾರವಿದೆ. ಅಂಥ ಜೀವನ ಪೂರ್ಣವಾಗಿ ಮತ್ತು ಕೇವಲವಾಗಿ ಸೇವೆಗೇ ಮುಡಿಪಾಗಿರಬೇಕು. ಸೇವಾಧರ್ಮದಿಂದೊದಗುವ ಅನಿರ್ವಚನೀಯ ಆನಂದದಿಂದಯಾರನ್ನೂ ಯಾರೂ ವಂಚಿಸಲಾರರು. ಆ ಅಮೃತ ಅಂತರ್ಯದಿಂದಲೇ ಚಿನ್ಮಾತ್ರ ಜೀವನವನ್ನು ಪೋಷಿಸುತ್ತದೆ. ಇದರಲ್ಲಿ ಚಿಂತೆಗಾಗಲಿ, ಅಸಹನೆಗಾಗಲಿ ಸ್ಥಳವೇ ಇಲ್ಲ. ಈ ಆನಂದವಲ್ಲದೆ ದೀರ್ಘಾಯುಸ್ಸು ಅಸಾಧ್ಯವೇ ಸರಿ. ಒಂದು ವೇಳೆ ಸಾಧ್ಯವಾದರೂ ಅದು ನಿರರ್ಥಕ

ಬಾಹ್ಯ ಸಾಧನಗಳಿಂದ ಜೀವನವನ್ನು ೧೨೫ ವರ್ಷಗಳ ವರೆಗೆ ತಾಳಿಸುವ ಸಾಧ್ಯಾಸಾಧ್ಯತೆಯ ಮಾತು ನನ್ನೀ ವಾದಕ್ಕೆ ಹೊರತಾದ ವಿಷಯ.

ಸೇವಾಗ್ರಾಮ, -ಮೋ. ಕೆ. ಗಾಂಧಿ
೧೧-೨-೪೬ (ಗುಜರಾಥಿಯಿಂದ)

### ರಾಜಾಜಿಯವರ ಬಗ್ಗೆ

ಶ್ರೀ ಕಾಮರಾಜ ನಾಡರರು ಪತ್ರಿಕೆಗಳಲ್ಲಿ ಪ್ರಸಿದ್ಧಿಸಿರುವಪ್ರಕಟನೆ ಓದಿದೆ;ನನಗೆ ಖೇದವಾಯಿತು ನಾನು ಯಾವ ತೊಂದರೆ ಇಲ್ಲದೆ ಸುಮ್ಮನಿದ್ದುಬಿಡಬಹುದಾಗಿತ್ತು. ಆದರೆ ಹಾಗೆ ಮಾಡುವದರಿಂದ ಮೂಲ ಉದ್ದೇಶಕ್ಕೆ ಬಾಧೆ ಬರುವದು. ಅವರು ನನ್ನ ಅನುಯಾಯಿಗಳಿರುವೆವೆಂದು ಹೇಳುತ್ತಾರೆ.ಹಾಗಿದ್ದರೆ ಪತ್ರಿಕೆಗಳಿಗೆ ಪ್ರಕಟನೆ ಕೊಡುವ ಮೊದಲು, ರಾಜೀನಾಮೆ ಕೊಡುವ ಮೊದಲಿಗಂತೂ,ನಿಶ್ಚಿತವಾಗಿ ನನ್ನನ್ನು ಕೇಳಬೇಕಾಗಿತ್ತು. ನಾನು ‘ಭಂಗಿ’ ಇದ್ದೇನೆಂದು ಉದ್ದೇಶ ಪೂರ್ವಕವಾಗಿ ಹೇಳಿಕೊಂಡಿದ್ದೇನೆ. ಮನುಷ್ಯನೇ ಕಲ್ಪಿಸಿದ ಸಾಮಾಜಿಕ ಹಂತದಲ್ಲಿ ನಾನು ಬುಡದಲ್ಲಿಯೆ ಉಳಿಯಲಿಚ್ಛಿಸುತ್ತೇನೆ. ಶ್ರೀ ಕಾಮರಾಜರು ನಾಡರರಾಗಿ ಉಳಿಯದೆ ನನ್ನಂತೆ ‘ಭಂಗಿ’ಗಳಾಗಿ ಅತ್ಯಂತ ವಿನಯದಿಂದ ತಮ್ಮ ರಾಜೀನಾಮೆಯನ್ನು ಹಿಂತೆಗೆದುಕೊಳ್ಳಬೇಕೆಂದು ನಾನು ಬಯಸುತ್ತೇನೆ. ಇದು ಕ್ರಮಬದ್ಧವಾಗಿ ಸಾಧ್ಯವಿರುವದೊ ಇಲ್ಲವೊ ಎಂಬುದನ್ನು ಪ್ರಾಂತಿಕ ಕಾಂಗ್ರೆಸ ಕಮೀಟಿ ಮತ್ತು ಕಾಂಗ್ರೆಸ ಕಾರ್ಯಕಾರಿ ಮಂಡಳವು ನಿರ್ಧರಿಸಬಲ್ಲವು. ರಾಜೀನಾಮೆ ಕೊಡುವದರಿಂದ ತನಗೂ ತನ್ನ ಧ್ಯೇಯಕ್ಕೂ ಅಪಾಯವನ್ನುಂಟುಮಾಡಿರುವೆನೆಂಬ ಅರಿವು ಇದ್ದರೆ ಇದು ನೈತಿಕವಾಗಿ ತೀರ ಸಾಧ್ಯವಿದೆ. ನಂತರ ಅವರು ತಮ್ಮ ಹೊಣೆಗಾರಿಕೆಯ ಸ್ಥಳವನ್ನು (ಕ್ರಮಬದ್ಧ ರೀತಿಯಿಂದ ಸಾಧ್ಯವಿದ್ದರೆ) ಸಮರ್ಥರಂತೆ ಪುನಃ ವಹಿಸಿಕೊಳ್ಳುವರು. ರಾಜೀನಾಮೆ ಕೊಡುವಾಗ ದುರ್ಬಲರಂತೆ ನಡೆದುಕೊಂಡರು. ರಾಜೀನಾಮೆ ಕೊಡಲಿದ್ದ ಬೇರೆ ನಾಲ್ವರನ್ನು ತಾವು ತಡೆದೆವೆಂದು ಅವರು ಹೇಳಿದ್ದಾರೆ. ಆ ನಾಲ್ವರು ರಾಜೀನಾಮೆ ಕೊಡದಿದ್ದದ್ದೆ ಒಳಿತಾಯಿತು.

‘ಗುಂಪು’ (‘ಕ್ಲಿಕ್’)ಎಂಬ ಶಬ್ದಪ್ರಯೋಗಕ್ಕೆ ಇಷ್ಟುನೊಂದುಕೊಳ್ಳುವದೇಕೆ?ಆಂಗ್ಲಭಾಷೆಯಬಗ್ಗೆ ನನಗೆಷ್ಟೆ ಆದರವಿದ್ದರೂ ಪರಭಾಷೆಯಾದ ಅದರ ಪ್ರಯೋಗದಲ್ಲಿ ನಾನು ತಪ್ಪು ಮಾಡುವ ಸಂಭವವೂ ಇರುತ್ತದೆ. ಆ ಶಬ್ದವನ್ನು ಉದ್ದೇಶಪೂರ್ವಕ ಉಪಯೋಗಿಸಿದ್ದೇನೆ. ನಾನು ಅದನ್ನು ಹಿಂತೆಗೆದುಕೊಳ್ಳಬಾರದು. ‘ ಒಂದು ವಿಶಿಷ್ಟ ಪಂಗಡ ’ ಎಂದು ಆ ಶಬ್ದಕ್ಕೆ ಶಬ್ದಕೋಶದಲ್ಲಿ ಅರ್ಥವಿದೆ. ತಮಿಳನಾಡಿನಲ್ಲಿ ರಾಜಾಜಿಯವರ ವಿರುದ್ಧ ಪಂಗಡ ಕಟ್ಟಿಕೊಂಡಿದ್ದು ನನಗೆ ಗೊತ್ತಿದೆ. ಅದರಲ್ಲಿಯ ಒಬ್ಬ ವ್ಯಕ್ತಿಯನ್ನಾದರೂ ಹೆಸರೆತ್ತಿ ಹೇಳುವದು ನನಗೆ ಸಾಧ್ಯವಿಲ್ಲ ಹತ್ತಿ ಕದ್ದದು ಯಾಕೆ ಅಂದರೆ ಗಡ್ಡ ಮುಟ್ಟಿ ನೋಡಿಗೊಳ್ಳುವದೇಕೆ ? ಕಾಂಗ್ರೆಸಿನಲ್ಲಿಯೂ, ಜಗತ್ತಿನ ಅತ್ಯುತ್ತಮ ಸಂಸ್ಥೆಗಳಲ್ಲಿಯೂ ಪಂಗಡಗಳಿದ್ದೇ ಇವೆ. ಇವು ಕಡಿಮೆಯಾದಷ್ಟು ಸಂಸ್ಥೆಯ ಹೆಚ್ಚಳಕ್ಕೆ ಅನುಕೂಲ.

ನನ್ನ ದಕ್ಷಿಣ ಯಾತ್ರೆಯಲ್ಲಿ ನನಗೆ ಆಹ್ವಾನವಿತ್ತಿದ್ದಿಲ್ಲವಾದರೆ ನಾನು ಮೌನದಿಂದಿರಬಹುದಾಗಿತ್ತು.

ಆ ವಿಶೇಷ ಗಾಡಿಯಲ್ಲಿ ನನ್ನೊಡನೆ ಪ್ರಯಾಣ ಬೆಳೆಸುತ್ತಿದ್ದವರೊಂದಿಗೆ ನಾನು ಈ ಬಗ್ಗೆ ಮಾತಾಡಲಿಲ್ಲವೆಂಬುದನ್ನು ಒಪ್ಪಿಕೊಳ್ಳುತ್ತೇನೆ. ಗಾಡಿ ನಿಂತಲ್ಲೆಲ್ಲ ಸಭೆ, ಗಾಡಿ ನಡೆದಾಗ ಬರವಣಿಗೆ ಇವುಗಳಲ್ಲಿ ನಾನು ತನ್ಮಯನಾಗಿದ್ದೆ. ನನ್ನ ವಯಸ್ಸಿನವರು ಹೆಚ್ಚು ತಾಳ್ಮೆಯಿಂದಿರಬೇಕಾಗುವದು ಮತ್ತು ಜನರು ನನ್ನ ಹತ್ತರ ಬಂದು ಕೆಲಸದಲ್ಲಿ ಪೀಡಿಸಬಾರದೆಂಬುದನ್ನು ಸಾರ್ವಜನಿಕರು ಅರಿತುಕೊಳ್ಳಲಿ. ನನ್ನ ಪ್ರಕ್ಷುಬ್ಧ ಜೀವನದಲ್ಲಿ ಇದೇ ರೂಢಿಯಾಗಿದೆ. ನನ್ನ ಮಕ್ಕಳಿಗೂ ನನ್ನೊಡನೆ ಸಾಕಷ್ಟು ಸಮಯ ಇರಲಿಕ್ಕೆ ಇಂಬು ದೊರೆಯುವದಿಲ್ಲ. ಅಜ್ಞಾತವಾಸದಿಂದ ಆದೇ ಹೊರಬಿದ್ದು ಬಂದ ಅರುಣಾ ಅಸಫಅಲ್ಲಿಯು ನನ್ನ ಸಂದರ್ಶನೆಕ್ಕಾಗಿ ಎರಡು ದಿನ ದಾರೀ ಕಾಯ್ದರೂ ನನ್ನ ಸಂಚಾರದ ಸಮಯದಲ್ಲಿ ಅಷ್ಟೆ ಅವಳಿಗೆ ಮಾತಾಡಲು ಇಂಬು ದೊರೆಯಿತು.

ಸೇವಾಗ್ರಾಮ ಮೋ. ಕ. ಗಾಂಧಿ
೧೫-೨-೪೬.

### ದನಗಳ ಸಂರಕ್ಷಣೆ

ವರ್ಧಾದಲ್ಲಿರುವ ಗೋಸೇವಾ ಸಂಘವು ಶ್ರೀ ಜಮನಾಲಾಲ ಬಜಾಜರ ಕೊನೆಯ ಕೃತಿ. ಅವರು ಸಾರ್ವಜನಿಕರ ಸೇವೆಯನ್ನು ಬಹುಮುಖವಾಗಿ ಮಾಡಿದರು, ಹಣಗಳಿಸುವದನ್ನವರು ಅನೇಕ ವರ್ಷಗಳಿಂದ ಬಿಟ್ಟುಕೊಟ್ಟಿದ್ದರು. ಸಾರ್ವಜನಿಕ ಚಟುವಟಿಕೆಗಳಿಗೆ ಆರ್ಥಿಕ ಸಹಾಯ ನೀಡುವದಕ್ಕಾಗಿಯೆ ಅವರು ಹಣದ ಚಿಂತೆ ಮಾಡುತ್ತಿದ್ದರು. ಅವರ ೫ನೇ ಪುಣ್ಯತಿಥಿಯಾದ ಫೆಬ್ರುವರಿ ೧೧ ಕ್ಕೆ ಗೆಳೆಯರ, ಕಾರ್ಯಕರ್ತರ ಸಭೆಯನ್ನು ಗೋಸೇವಾ ಸಂಘದಲ್ಲಿ ನಡೆಸಿ ಪುಣ್ಯತಿಥಿಯನ್ನಾಚರಿಸಬೇಕೆಂದು ಅವರ ಅನುಯಾಯಿಗಳು ನಿಶ್ಚಯಿಸಿದ್ದರು.

ಜಮನಾಲಾಲರು ಸಾಯುವ ಒಂದು ಗಂಟೆ ಪೂರ್ವದಲ್ಲಿಯೂ ಇದೇ ಕಾರ್ಯದಲ್ಲಿ ನಿರತರಾಗಿದ್ದರು. ಈ ಸಭೆಸೇರಿದ್ದ ಗೋಪುರಿಯನ್ನು ಅವರು ನಿರ್ಮಿಸಿದ್ದು ಅವರ ಅಸ್ಥಿಶೇಷಗಳು ಅಲ್ಲಿಯೆ ಇವೆ. ಗೋಸೇವಾ ಸಂಘದ ಕಾರ್ಯಕರ್ತರ ಪ್ರಥಮ ಸಭೆಯೂ ಇಲ್ಲಿಯೆ ಸೇರಿತ್ತು, ‘ಗೋಸೇವಾ’ ಎಂಬ ಹೆಸರನ್ನು ಬಹಳ ವಿಚಾರಪೂರ್ವಕ ಆರಿಸಲಾಗಿದೆ. ‘ಗೋರಕ್ಷಾ’ ಎಂಬ ಶಬ್ದದಲ್ಲಿಯ ದಾತೃಭಾವವನ್ನು ‘ಸೇವಾ’ ಎಂಬ ಶಬ್ದದಿಂದ ಕಿತ್ತಿಹಾಕಲಾಗಿದೆ. ಗೋವು ಮಾತೆಯೆಂದು ಹಿಂದುಗಳು ನಂಬುತ್ತಾರೆ. ಅದು ನಿಜವಾದದ್ದಾಗಿದೆ. ಒಬ್ಬ ಅಮೇರಿಕನನು ಆವು ಎಂದರೆ ಏಳಿಗೆಯ ತವರು ಎಂದು ಹೇಳಿದ್ದಾನೆ ಅದೂ ನಿಜವಿದೆ. ಪಾಶ್ಚಾತ್ಯರು ಗೋಮಾಂಸ ತಿನ್ನುತ್ತಿದ್ದಾರೆಂಬುದು ಬೇರೆ ವಿಷಯ.

ಆದರೂ ಜನರಿಗೆ ಸುಖ ನೆಮ್ಮದಿಗಳನ್ನು ಕೊಡುವಂಥ ಪ್ರಾಣಿಗಳಲ್ಲಿ ಆಕಳು ಉಚ್ಚತಮ ಸ್ಥಾನವನ್ನು ಪಡೆದಿದೆಂಬುದನ್ನು ಒಪ್ಪುತ್ತಾರೆ. ಆಕಳ ಹಾಲಿಲ್ಲದೆ ಮನುಷ್ಯನು ಜೀವಿಸಬಹುದು ಎಂದು ಭಾರತೀಯನು ಭಾವಿಸುವದು ಅಸಾಧ್ಯವಲ್ಲದಿದ್ದರೂ ಕಠಿಣವಾಗಿದೆ.

ದನಗಳ ಸಂಗೋಪನೆಯೆ ಗೋಸೇವೆಯ ಮುಖ್ಯಾಂಶವಾಗಿದೆ. ಭಾರತಕ್ಕೆ ಮಹತ್ವದ ಪ್ರಶ್ನೆಯಾಗಿದೆ. ಗೋವಿಗೆ ಪೂಜೆ ಸಲ್ಲಿಸುವ ನಾಡು ಅದಕ್ಕೂ ಅದರ ಸಂತತಿಗೂ ತೀರ ಅನಾದರವನ್ನು ತೋರುತ್ತಿರುವದು ಶೋಚನೀಯವಾಗಿದೆ. ನಾವು ಆಕಳನ್ನು ಕೊಲ್ಲುವದಿಲ್ಲವಾದರೂ ನಿಜವಾಗಿಯೂ ಹಿಂಸಿಸುತ್ತೇವೆ. ಈಗ ದನಕರುಗಳು ಭಾರವೆನಿಸುವ ಪರಿಸ್ಥಿತಿ ಉಂಟಾಗಿ ಜನರು ಅವನ್ನು ಕೊಂದುಬಿಟ್ಟು ಭಾರ ಇಳಿಸುಕೊಳ್ಳುವ ಯೋಚನೆಯಲ್ಲಿದ್ದಾರೆ. ಇಷ್ಟೆಲ್ಲ ವಿಘ್ನಗಳನ್ನು ಒಬ್ಬ ಜಮನಾಲಾಲರು ಹೇಗೆ ಎದುರಿಸಿಕೊಳ್ಳಬಲ್ಲರು? ಅವರೂ ಈಗ ನಮ್ಮೊಂದಿಗಿಲ್ಲ.

ಕೇವಲ ಭಾಷಣಗಳಿಂದ ಈ ಪ್ರಶ್ನೆ ಬಗೆಹರಿಯಲಾರದು. ಈ ಸಮಸ್ಯೆಯನ್ನು ಆಳವಾಗಿ ಅಭ್ಯಾಸಿಸಬೇಕಾದ ಮತ್ತು ತ್ಯಾಗಬುದ್ಧಿಯನ್ನು ತೋರಬೇಕಾದ ಅತ್ಯಗತ್ಯವಿದೆ. ಹಣವನ್ನು ರಾಶಿಯಾಗಿ ಗಳಿಸಿ ಉದಾರ ದಾನಮಾಡುವದು. ಉದ್ಯೋಗದ ನಿಜವಾದ ಸಾಮರ್ಥ್ಯವಲ್ಲ. ದನಗಳ ಸಂಗೋಪನ ಹೇಗೆ ನಡೆಸಬೇಕೆಂಬದನ್ನು ಅರಿತುಕೊಂಡು ಲಕ್ಷಾವಧಿ ಜನರಿಗೆ ಅದನ್ನು ತಿಳಿಸಿಹೇಳಿ ಆದರ್ಶದಂತೆ ನಡೆದುಕೊಂಡು ಆ ಪ್ರಯತ್ನಕ್ಕಾಗಿ ಹಣ ವೆಚ್ಚಮಾಡುವದೆ ಉದ್ಯೋಗದ ಜೀವಾಳ. ಇಂದಿನ ಪರಿಸ್ಥಿತಿ ಏತದ್ವಿರುದ್ಧವಾಗಿದೆ. ಬಲ್ಲಿದರು ಹೇಗೋ ಹಣಗಳಿಸಿ ಅಶಿಕ್ಷಿತ ಜನರು ನಡೆಸಿಕೊಂಡು ಹೋಗುತ್ತಿರುವ ಗೋಶಾಲೆಗಳಿಗೆ ಅಲ್ಪ ಹಣ ದಾನವಾಗಿ ಕೊಟ್ಟು ಗುಣಿಗಳಾದೆವೆಂಬ ಭ್ರಮೆಯಲ್ಲಿರುತ್ತಾರೆ. ಈ ಕುಂದುಕೊರತೆಗಳನ್ನು ಅರಿತಿದ್ದ ಜಮನಾಲಾಲರು ಇವನ್ನು ನೀಗಿಸುವ ಯೋಜನೆ ಚಿಂತಿಸುತ್ತಿದ್ದರು. ಈ ಸಮಸ್ಯೆಯನ್ನು ಬಿಡಿಸಲು ಸ್ವರಾಜ್ಯ ಸಂಪಾದನೆಗೆ ಬೇಕಾಗುವ ಸಾಮರ್ಥ್ಯಕ್ಕಿಂತ ಹೆಚ್ಚಿನ ಸಾಮರ್ಥ್ಯ ಬೇಕಾಗಬಹುದು.

ಸೇವಾಗ್ರಾಮ —ಮೋ. ಕ. ಗಾಂ.
೯—೨—೧೯೪೬. (ಹಿಂದುಸ್ತಾನಿಯಿಂದ)

## ಅಹಿಂಸೆ ಮತ್ತು ಮಹಿಳೆಯರ ಮೇಲಿನ ಅತ್ಯಾಚಾರ

೧೯೪೬ ಡಿಶೆಂಬರ ೨೯ ನೇ ರಾತ್ರಿ ಗಾಂಧೀಜಿಯವರು ಮಹಿಷದಲ ಹಾಗೂ ಸುತ್ತಲಿನ ಹಳ್ಳಿಗಳ ೨೦೦ ಸ್ತ್ರೀ ಪುರುಷರನ್ನು ಕಂಡು ಮಾತಾಡಿದರು. ೧೯೪೨ ರ ಚಳವಳಿಯಲ್ಲಿ ಪೋಲೀಸ ಹಾಗು ಮಿಲಿಟರಿ ಅತ್ಯಾಚಾರಗಳಿಗೆ ಗುರಿಯಾದ ಕೆಲವು ಸ್ಥಾನಿಕ ಕಾರ್ಯಕರ್ತರು ಅವರಲ್ಲಿದ್ದರು. ಪ್ರಶ್ನೆಗಳನ್ನು ಕೇಳಲು ಗಾಂಧಿಜಿಯವರು ಅವರಿಗೆ ತಿಳಿಸಿದರು. ಕಣ್ಣೆದುರಿನಲ್ಲಿಯೇ ಮಹಿಳೆಯರ ಮಾನಭಂಗ ಮಾಡುವಾಗ ಕಾರ್ಯಕರ್ತರು ಅಹಿಂಸೆಯಿಂದ ಸುಮ್ಮನೇ ಕುಳಿತುಕೊಳ್ಳಬೇಕೋ ಎಂದು ಮೊದಲನೆಯ ಪ್ರಶ್ನೆ ಮುಂದೆ ಬಂದಿತು. ಸ್ವರಾಜ್ಯದ ಸಲುವಾಗಿ ಕಷ್ಟ ಸಹಿಸಲು ಸಿದ್ಧರಿದ್ದರು. ಅಹಿಂಸೆ ಬಿಟ್ಟು ಹಿಂಸೆಗೆ ಕೈ ಹಾಕಿದರೆ ಸ್ವರಾಜ್ಯ ಸಾಧನೆಯು ಮುಂದೆ ಬೀಳುವದೆಂದೂ ಅವರು ನಂಬಿದ್ದರು. ಆದರೆ ಮಹಿಳೆಯರ ಮಾನಭಂಗವಾಗುವಾಗ ಅವರೇನು ಮಾಡಬೇಕು ?

೧೯೨೦ ಮತ್ತು ೧೯೨೧ ರಲ್ಲಿ ಜನರು ಇದೇ ಪ್ರಶ್ನೆ ಕೇಳಿರುವದಾಗಿಯೂ ಆಗ ಕೊಟ್ಟ ಉತ್ತರವನ್ನೇ ಪುನರುಚ್ಚರಿಸುವದಾಗಿಯೂ ಮಹಾತ್ಮರು ಉತ್ತರಿಸಿದರು. ಈ ಪ್ರಶ್ನೆ ಕೇಳುವವರಿಗೆ ಅಹಿಂಸೆಯ ಪೂರ್ಣ ಅರ್ಥ ಮತ್ತು ನನ್ನ ಕಲ್ಪನೆಯ ಸ್ವರಾಜ್ಯದ ತಿರುಳು ತಿಳಿದಿರುವದಿಲ್ಲ. ಮಹಿಳೆಯರ ಮಾನಭಂಗ ಮಾಡಿಸಿ ಸ್ವರಾಜ್ಯ ಸಂಪಾದಿಸುವದು ಗಾಂಧೀಜಿಯವರಿಗೆ ಬೇಡ. ಅಹಿಂಸೆಯಿಂದ ಮಹಿಳೆಯ ಮಾನ ರಕ್ಷಿಸುವದಾಗದಿದ್ದರೆ ಅಥವಾ ಅದರ ಸಹಾಯದಿಂದ ಮಹಿಳೆಯರಿಗೆ ತಮ್ಮ ಗೌರವ ರಕ್ಷಣೆ ಮಾಡಿಕೊಳ್ಳುವದಾಗದಿದ್ದರೆ ಅದು ಅಹಿಂಸೆಯೇ ಅಲ್ಲ. "ಅಹಿಂಸೆಯು ಇದಕ್ಕಿಂತ ತೀರ ಭಿನ್ನವಾಗಿದೆಯೆಂದು ನಾನು ಹೇಳುತ್ತೇನೆ, ಅದನ್ನು ನಂಬಿರಿ" ಎಂದು ಅವರು ಹೇಳಿ ೧೯೦೯ ರಲ್ಲಿ "ಹಿಂದ ಸ್ವರಾಜ್ಯ"ದಲ್ಲಿ ಬರೆದ ಉತ್ತರವನ್ನು ವಿವರಿಸಿದರು. ನವಜೀವನ ಮುದ್ರಣಾಲಯದಲ್ಲಿ ಮುದ್ರಿತವಾದ ಆ ಹೊತ್ತಿಗೆಯ ೪೪ ರಿಂದ ೫೦ ನೇ ಪುಟದ ವರೆಗಿರುವ ವಿವರವನ್ನು ಓದುಗರು ಓದಬೇಕು. "ಸೀತೆಯನ್ನು ರಾವಣನಿಂದ ಯಾರು ರಕ್ಷಿಸಿದರು? ಅವಳ ಪಾತಿವ್ರತ್ಯ ಅತ್ಯಂತ ಪವಿತ್ರವಿದ್ದದರಿಂದ ಅವಳಪ್ಪಣೆಯಿಲ್ಲದೆ ರಾವಣನು ತನ್ನ ದುರಾಶೆಯನ್ನು ತೃಪ್ತಿಪಡಿಸಿಕೊಳ್ಳುವ ಧೈರ್ಯ ಮಾಡಲಿಲ್ಲ."

ಅಹಿಂಸಾವ್ರತಧಾರಿಗಳಾದುದರಿಂದ ಮಹಿಳೆಯರ ಮಾನ ರಕ್ಷಿಸುವದಾಗಲಿಲ್ಲವೆಂದು ಯಾರಾದರೂ ನನ್ನ ಕಡೆಗೆ ಬಂದರೆ ಅವರಿಗೆ ನನ್ನಲ್ಲಿ ಆಶ್ರಯ ಕೊಡಲಾರೆನೆಂದು ಗಾಂಧೀಜಿಯವರು ಎಚ್ಚರಿಸಿದರು. ಅಹಿಂಸೆಯ ಮರೆಯಲ್ಲಿ ಹೇಡಿತನವನ್ನು ಮುಚ್ಚಿಕೊಳ್ಳಬಾರದು. ಅದು ಶೂರರ ಶಸ್ತ್ರ. ಮಾನಭಂಗವನ್ನು ಕಣ್ದೆರೆದು ನೋಡುವದಕ್ಕಿಂತ ಧೀರರಾಗಿ ಹೋರಾಡಿ ಸಾಯುವದು ಲೇಸೆಂದು ಅವರ ಅಭಿಪ್ರಾಯವಿದೆ. ನಿಜವಾದ ಅಹಿಂಸಾವಾದಿಯು ಇಂಥ ಕತೆ ಹೇಳುವದಕ್ಕೆ ಬದುಕಿ ಉಳಿಯಲಾರನು. ಅಂಥವನು ಅಹಿಂಸೆಯಿಂದ ಪ್ರತಿಭಟಿಸುತ್ತ ಅಲ್ಲಿಯೇ ಪ್ರಾಣತ್ಯಾಗ ಮಾಡುವನು.

ಗಾಂಧೀಜಿಯವರು ವಾಯವ್ಯ ಗಡಿನಾಡ ಪ್ರಾಂತದ ಸಂಚಾರಕ್ಕೆ ಹೋದಾಗ, ಖುದಾಯಿ ಖಿದಮತಗಾರರು ಇದೇ ಪ್ರಶ್ನೆ ಕೇಳಿದುದು ನನ್ನ ನೆನಪಿನಲ್ಲಿದೆ "ಚಾಂಡಾಲರು ನಿಮ್ಮನ್ನು ಕೊಲ್ಲದೆ ಕಟ್ಟಿಹಾಕಿ, ಬಾಯಿ ಬಿಗಿದು ಅಂಥ ಅಪಕೃತ್ಯವನ್ನು ನಿಃಸಹಾಯರಾಗಿ ನೋಡುವಂತೆ ಮಾಡಿದರೆ ನೀವೇನು ಮಾಡುವಿರಿ?" ಎಂದು ಅವರು ಮಹಾತ್ಮಾಜಿಯವರನ್ನು ಕೇಳಿದರು. ಮಹಿಷದಲ ಹಳ್ಳಿಗರಿಗೆ ಕೊಟ್ಟ ಉತ್ತರದಂತೆಯೇ ಅದು ಇತ್ತು— "ನನ್ನ ಬಂಧನಗಳನ್ನು ಹರಿದೊಗೆವ ವರೆಗೆ ಅಥವಾ ಅದರಲ್ಲಿ ನಾನೇ ಮಡಿಯುವ ವರೆಗೆ ಹೋರಾಡುತ್ತಿದ್ದೆ" ಎಂದು ಗಾಂಧೀಜಿಯವರು ಉತ್ತರಿಸಿದರು. "ಎಂಥ ಪ್ರಸಂಗ ಬಂದರೂ ಆ ದೃಶ್ಯವನ್ನು ನೋಡಲು ನಾನು ಬದುಕಿ ಉಳಿಯುತಿದ್ದಿಲ್ಲ. ಮಾನರಕ್ಷಣೆ ಮಾಡಬೇಕೆಂಬ ಉತ್ಕಟೇಚ್ಛೆ ಇದ್ದರೆ ಪರಮಾತ್ಮನು ನಿಮ್ಮ ಸಹಾಯಕ್ಕೆ ಬರುವನು. ಮತ್ತು ಅಂಥ ಅಪಕೃತ್ಯಕ್ಕೆ ನೀವು ಸಾಕ್ಷೀದಾರರಾಗುವಂಥ ದುರ್ಧರ ಪ್ರಸಂಗವನ್ನು ತಪ್ಪಿಸುವನು."

ಮಹಿಷಾದಲ — ಶ್ರೀ. ಅ.

## ಗಾಂಧೀಜಿಯ ಆಪ್ತ ಕಾರ್ಯದರ್ಶಿ

"ಆಪ್ತ" ಅಥವಾ "ಖಾಸ" ಕಾರ್ಯದರ್ಶಿಯೆಂಬ ಶಬ್ದ ಗಾಂಧೀಜಿಯ ಸಂಬಂಧದಲ್ಲಿ ತುಸು ಅಸಮಂಜಸ ನಾಮವೆನ್ನಬೇಕು. ಏಕೆಂದರೆ ಗಾಂಧೀಜಿಯ ಹತ್ತರ "ಖಾಸಗಿತನ" ಅಥವಾ ಗುಟ್ಟು ಎಂಬುದೇ ಇಲ್ಲ. ಅವರ ಕೈಕೆಳಗಿನ ಆಪ್ತಕಾರ್ಯದರ್ಶಿತ್ವ ವಿಶಿಷ್ಟರೂಪದ್ದು. "ಆಪ್ತಕಾರ್ಯದರ್ಶಿ"ತ್ವ, ಅದೂ ರಾಜಕೀಯ ವಿಚಾರಕ್ಕೆ ಸಂಬಂಧಿಸಿದ್ದರೆ, ಜನಸ್ತೋಮದ ಮನಸ್ಸಿನಲ್ಲಿ ಅದ್ಭುತ ಕಲ್ಪನೆಗಳನ್ನು ಹುಟ್ಟಿಸುತ್ತದೆ, ಗೌರವ, ಪ್ರಭಾವಗಳ ದ್ಯೋತಕವಾಗುತ್ತದೆ. ಖಾತೆಗಳ ಶಾಶ್ವತ ಉಪಕಾರ್ಯದರ್ಶಿಗಳು ಪ್ರಬಲವಾದ ಪ್ರಭಾವವನ್ನು ಪಡೆದವರಾಗಿರುವರೆಂದೂ ಪ್ರಭಾವಶಾಲಿ ರಾಜಕೀಯ ಧುರೀಣರ ಕಾರ್ಯದರ್ಶಿಸ್ಥಾನ ಕಾಮ್ಯವಾದ ಪದವಿಯಿದ್ದು ಅದು ಸಾರ್ವಜನಿಕ ಜೀವನದ, ಅಥವಾ ಅಧಿಕಾರ ಸ್ಥಾನದ ಮೊದಲ ಮೆಟ್ಟಿಲು ಮತ್ತು ಅನೇಕ ವೇಳೆ ಆ ಧುರೀಣನ ಸ್ಥಾನದ ಉತ್ತರಾಧಿಕಾರವೆಂದೂ ಸಾಮಾನ್ಯವಾಗಿ ಗೊತ್ತಿದ್ದ ಮಾತು. ಗಾಂಧೀಜಿಯ ಮಟ್ಟಿಗೆ ಮಾತ್ರ ಇದೆಲ್ಲ ತಿರುವುಮುರುವು. ಅವರ ಆದರ್ಶ ಕಾರ್ಯದರ್ಶಿಗೆ ತನ್ನ ಗುರುವಿನ ಧ್ಯೇಯಗಳ ಅತ್ಯುತ್ತಮ ಸೇವೆಯನ್ನೆಂತು ಮಾಡಬೇಕೆಂಬ ಹೊರತು ಅನ್ಯ ಆಸಕ್ತಿ ಇರಕೂಡದು. ಅವನು ಕೀರ್ತಿಯೆ ಮೊದಲಾದ ಸಾಮಾನ್ಯ ಜನರು ಕಾಮಿಸುವ ಜೀವನದ ಥಳಕಿನ ಆಕಾಂಕ್ಷೆಗಳಿಗೆಲ್ಲ ತಿಲಾಂಜಲಿ ಬಿಟ್ಟಿರಬೇಕು. ಅವನು ತನ್ನನ್ನು ಸಂಪೂರ್ಣವಾಗಿ ಇಲ್ಲದಂತೆ ಮಾಡಿಕೊಂಡು ಅವರೂ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳದೆ ತನ್ನ ಗುರುವಿನಲ್ಲಿ ಲೀನನಾಗಬೇಕು. ಸ್ವಲ್ಪದರಲ್ಲಿ ಅವನು ಗುರುವಿನ ಪ್ರತಿಪ್ರಾಣನಾಗಬೇಕು. ಅವನು ಸ್ವಾಯತ್ತನಾದರೂ ಗುರುವಿನೊಡನೆಏಕತಾನನಾಗಿರಬೇಕು. ಇದು ಮುಖ್ಯ ಅವಶ್ಯಕತೆ—ಇತರ ಎಲ್ಲ ಗುಣ ಉಪಸೂತ್ರಗಳಂತೆ,ಅದರಿಂದಲೇ ಮೂಡಿ ಪಸರಿಸಿದ್ದು.

ಎರಡನೇ ದುಂಡುಮೇಜಿನ ಪರಿಷತ್ತಿನ ಕಾಲಕ್ಕೆ ಲಂಡನದಲ್ಲಿ, ನಮ್ಮೊಡನೆ ಸಮೀಪ ಸಂಪರ್ಕ ಬೆಳೆಸಿದ್ದ ಹಿಂದುಸ್ತಾನ ಕಚೇರಿಯ ಯುವಕ ಕಾರ್ಯದರ್ಶಿಯೊಬ್ಬನು, ನಮಗೆ ಆಪ್ತವಾಕ್ಯ ಹೇಳುವವನಂತೆ, ಅಂದಿನ ಭಾರತ ಮಂತ್ರಿ ಲಾರ್ಡ ಪೀಲರೊಡನೆ ಅವಶ್ಯವಿದ್ದಾಗ ತಾನು ಸೌಹಾರ್ದ ಸಂಧಾನ ಮಾಡುವದಾಗಿ ಭರವಸೆ ತೋರಿಸಿದ. "ಆಪ್ತಕಾರ್ಯದರ್ಶಿಗಳಿಗಿರುವ ಪ್ರಭಾವ ನಿಮಗೆ ಗೊತ್ತು" ಎಂದು ಆತ ಕಣ್ಣು ಮಿಟುಕಿಸುತ್ತ ನುಡಿದ. ನಾವು ಇದಕ್ಕೆ ಅಪವಾದಪ್ರಾಯರು, ನಾವು ಬರಿ "ಹಮಾಲ"ರು ಎಂದು ನಾವು ಅವನಿಗೆ ಹೇಳಿದೆವು. "ನಾನೂ ಇನ್ನೊಬ್ಬ ಹಮಾಲ" ಎಂದು ಅವನು ಗಡಬಡಿಸಿ ಉತ್ತರವಿತ್ತ. ಎಲ್ಲರೂ ಕೂಡಿ ಮನಸಾರೆ ನಕ್ಕೆವು.

ತಾವೊಬ್ಬ ಭಂಗಿಯೆಂದೂ ನೇಕಾರರೆಂದೂ ನೂಲುವವರೆಂದೂ ರೈತರೆಂದೂ ಹಲವಿಧವಾಗಿ ಗಾಂಧೀಜಿ ತಮ್ಮನ್ನು ಬಣ್ಣಿಸಿಕೊಂಡದ್ದುಂಟು. ಆದುದರಿಂದ ಅವರ ಕಾರ್ಯದರ್ಶಿ ಇದೆಲ್ಲದರ ಪಡಿಯಚ್ಚಾಗಿರಬೇಕು. ಗಾಂಧೀಜಿ ತಾವು ರಾಷ್ಟ್ರದ ದಾಸಾಗ್ರಣಿಯೆಂದು ಮಾತ್ರ ಹೇಳಿಕೊಳ್ಳುತ್ತಾರೆ. ತಮ್ಮ ಕಾರ್ಯದರ್ಶಿ ದೇಶದ ದಾಸಾನುದಾಸನಾಗಿರಬೇಕೆಂದು ಅವರ ಅಪೇಕ್ಷೆ. ಕೇವಲ ಬೌದ್ಧಿಕ ಚಾಣಾಕ್ಷತೆ ಅವರ ದೃಷ್ಟಿಯಲ್ಲಿ ಕಃಪದಾರ್ಥ. ಬದಲಿಗೆ ಸತ್ಯನಿಷ್ಠೆ, ಆರ್ಜವ ಅವರು ಇಟ್ಟುಕೊಂಡ ಗುರಿಗಾಗಿ ಪ್ರಾಮಾಣಿಕ ಪ್ರಯತ್ನ, ಇವೇ ಅವರ ದೃಷ್ಟಿಯಲ್ಲಿ ಎಲ್ಲಕ್ಕೂ ಮಿಗಿಲು. ಅವರ ಕೈಕೆಳಗೆ ಯಾವುದೇ ಕೆಲಸ ಮಾಡಿದರೂ ಅದು ಒಂದು ಶಿಸ್ತಿನ ಶಿಕ್ಷಣ, ಜೀವನಕ್ಕೊಂದು ಪೂರ್ವಸಿದ್ಧತೆ. ಕಾರ್ಯದರ್ಶಿತ್ವ ಇದಕ್ಕೆ ಅಪವಾದವಲ್ಲ. ಅವರ ಕಾರ್ಯದರ್ಶಿಯಾದವನು ತನ್ನ ಪಾಲಿಗೆ ಬರುವ ಅತಿ ಚಿಲ್ಲರೆ ಕೆಲಸವನ್ನೂ ಅತಿ ಗುರುತರ ಕಾರ್ಯದಷ್ಟೇ ಒಪ್ಪಿಗೆಯಿಂದ, ಜೋಕೆ, ಏಕಾಗ್ರತೆಗಳಿಂದ ನೆರವೇರಿಸಬೇಕು. ಆ ಕೆಲಸಗಳು ಅಡಿಗೆ ಮಾಡುವದು, ಬಟ್ಟೆ ಒಗೆಯುವದು, ಪಾಯಖಾನೆಗಳನ್ನು ಸ್ವಚ್ಛ ಮಾಡುವದು, ಇಲ್ಲವೆ ರೋಗಿಗಳ ಶುಶ್ರೂಷೆ ಮಾಡುವದರಿಂದಾರಂಭಿಸಿ, ದೊಡ್ಡ ದಿನಪತ್ರಿಕೆ ನಡೆಸುವದು, ಅನತಿಮಿತ್ರರಾದ ಪತ್ರಲೇಖಕರ ಗಿಡುಚಿನ ಪ್ರಶ್ನೆಗಳಿಗೆ ಉತ್ತರವೀಯುವದು, ಮಹತ್ವದ ಸಂಭಾಷಣೆ ಅಥವಾ ಸಂದರ್ಶನದ ವಿವರಗಳನ್ನು ಜ್ಞಾಪಿಸಿಕೊಂಡು ಟಿಪ್ಪಣಿ ಹಾಕುವದು ಅಥವಾ ವಾಯಿಸರಾಯರೊಡನೆಯೋ ಅವರ ಅಧಿಕಾರಿಗಳೊಡನೆಯೋ ಭೆಟ್ಟಿಯಾಗಲು ವ್ಯವಹಾರ ಮಾಡುವವರ ವರೆಗಿನವಾಗಿರಬಹುದು. ದಿವಂಗತ ಮಹಾದೇವ ದೇಸಾಯರು ಇವೆಲ್ಲ ಶಾಖೆಗಳಲ್ಲಿಯೂ ಅಷ್ಟೇ ಸಾಮರ್ಥ್ಯದಿಂದ ಕೆಲಸಮಾಡಿ ಉತ್ತೀರ್ಣರಾದರು. ಆದರೆ ಅವರ ತರಬೇತಿ ನಿಜವಾಗಿ ಪ್ರಾರಂಭವಾದುದು ಮೊದಲನೆಯ ವರ್ಗದ ಕೆಲಸಗಳಲ್ಲಿ. ಎರಡನೆ ವರ್ಗದ ಕೆಲಸಗಳಲ್ಲಿ ಅವರ ಅಪೂರ್ವ ಯಶಸ್ಸಿಗೆ ಮೊದಲನೆ ವರ್ಗದವುಗಳಲ್ಲಿ ಅವರು ಪಡೆದ ತರಬೇತಿಯೆ ಕಾರಣವೆಂದು ಗಾಂಧೀಜಿ ಕಡೆಕಡೆಗೆ ಹೇಳುತಿದ್ದರು.

ಗಾಂಧೀಜಿಯ ಕಾರ್ಯದರ್ಶಿಯಾಗಿ ಮೊದಲು ಕಲಿಯಬೇಕಾದುದು ಚಿಲ್ಲರೆ ವಿಷಯಗಳಲ್ಲಿಯೂ ಸೂಕ್ಷ್ಮ ಮತ್ತು ಶುದ್ಧತೆ ಕಾಯುವದು. ಎಷ್ಟೇ ಚಿಕ್ಕ ವಿಷಯವಿರಲಿ, ಅದನ್ನು ದುರ್ಲಕ್ಷದಿಂದ ಅಥವಾ ಅನಾದರದಿಂದ ಮಾಡುವಂತಿಲ್ಲ. ಅವಸರದಲ್ಲಿ ಗೀಚಿದ ಚೀಟಿಯಲ್ಲಿಯೂ ಒಂದು ತಪ್ಪಿರಬಾರದು. ಸಾದಾ ಪೋಸ್ಟ ಕಾರ್ಡನ್ನಾದರೂ ಪುನಃ ಪರಿಶೀಲಿಸದೆ ಟಪಾಲಿಗೆ ಹಾಕುವದು ಅವರ ದೃಷ್ಟಿಯಲ್ಲಿ ಅಕ್ಷಮ್ಯ. ಕೆಲಸದ ಒತ್ತಡ, ಬಿಡುವಿನ ಅಭಾವಗಳ ನೆವ ಹೇಳುವದೆಂದರೆ ನಿಮ್ಮ ಮೇಲೆ ನೀವೇ ಆಪಾದನೆ ಹೊರಿಸಿಕೊಂಡಂತೆ. ಅಂಥ ಸ್ಥಿತಿಯಲ್ಲಿ ಸಿಕ್ಕಿಬಿದ್ದವನಿಗೆ ದೇವರೇ ಗತಿ! ಪ್ರತಿಯೊಂದರಲ್ಲಿ ಪರಿಪೂರ್ಣತೆ ಮತ್ತು ಪ್ರಮಾದರಾಹಿತ್ಯವಿರಬೇಕೆಂದು ಅವರ ಹಟ. ಅಪರೂಪಕ್ಕೆ ಪತ್ರ ಬರೆದವನಿಗಿತ್ತ ಉತ್ತರದಲ್ಲಿ ಕೂಡ ವಿಷಯದ ಪೂರ್ಣ ಅಧ್ಯಯನ ಮತ್ತು ಸೂಕ್ಷ್ಮಗ್ರಹಣವಿರಬೇಕು.

ಅವರ ಕಾರ್ಯದರ್ಶಿ ಆದೇಶ ಬರುವ ವರೆಗೆ ಕಾಯಕೂಡದು, ಅದನ್ನು ಊಹಿಸಬೇಕು. ಅರ್ಥಾತ್ ಅವನು ಸ್ವ ಬುದ್ಧಿಯಿಂದ ನಿರ್ಣಯಿಸಲು, ತಕ್ಕ ಮಟ್ಟಿಗೆ ಗಾಂಧೀಜಿಯ ಸ್ಥಾನವನ್ನು ವಹಿಸಲು ಸಿದ್ಧನಾಗಬೇಕು. ೧೯೨೧ ರಲ್ಲಿ, ದಿವಂಗತ ಪಂಡಿತ ಮೋತೀಲಾಲ ನೆಹರು ಅವರು, "ಇಂಡೆಪೆಂಡೆಂಟ" ಪತ್ರಿಕೆಯನ್ನು ವಹಿಸಿಕೊಳ್ಳಲು ಯಾರಾದರೊಬ್ಬನನ್ನು—ಮಹದೇವ ದೇಸಾಯರಾಗಿದ್ದರೆ ಒಳಿತು—ಕಳಿಸಬೇಕೆಂದು ಗಾಂಧೀಜಿಯನ್ನು ಕೇಳಿದರು. ಅದರ ಸಂಪಾದಕ ಜಾರ್ಜ ಜಾಸೇಫರ ಬಂಧನವಾಗುವ ನಿರೀಕ್ಷೆಯಿತ್ತು. ಗಾಂಧೀಜಿಯನ್ನು ಬಿಟ್ಟು ಹೋಗುವದು ಮಹಾದೇವರಿಗೆ ಬಹಳ ದುಃಖದಾಯಕವಾಯಿತು. "—ರನ್ನು ಏಕೆ ಕಳಿಸಬಾರದು" ಎಂದು ಅವರು ವಾದಿಸಿದರು. "ನೋಡಬಾರದೆ, ಲಾಲಾಜಿಯವರಿಂದ (ಲಾಲಾ ಲಜಪತರಾಯ)—ನನ್ನು ನಾನು ಹೇಗೆ ಕಸಿದುಕೊಳ್ಳಲಿ? ಅವನು ಅವರ ಬಲಗೈ" ಎಂದರು ಗಾಂಧೀಜಿ. "ಮತ್ತೆ ನಾನೊ?" ಎಂದು ಪ್ರತಿಷೇಧಿಸಿದರು ದೇಸಾಯರು. "ನಿನ್ನನ್ನು ನನ್ನ ಮೆದುಳಾಗಿ ರೂಪಿಸಬೇಕೆಂದಿದ್ದೇನೆ" ಎಂದು ಗಾಂಧೀಜಿಯ ಉತ್ತರ ಬಂತು. ದೇಸಾಯರು ಅವರ ಅಪೇಕ್ಷೆಯನ್ನು ಸಫಲವಾಗಿ ಪೂರೈಸಿದರು.

ಗಾಂಧೀಜಿಯ ಆದರ್ಶ ಕಾರ್ಯದರ್ಶಿಯ ಕೆಲಸದಲ್ಲಿ ಪತ್ರವ್ಯವಹಾರ ಮತ್ತು ಇತರ ಬರವಣಿಗೆ ಕೆಲಸಗಳು, ನಾನು ಮೊದಲೇ ಹೇಳಿದಂತೆ, ಅತ್ಯಲ್ಪ. ಅವರ ಕಾರ್ಯದರ್ಶಿ ಅವರ ವಿಚಾರಗಳನ್ನು ಮನನ ಮಾಡಿ, ಅವರ ಧ್ಯೇಯಗಳನ್ನು ಪ್ರಸಾರಗೊಳಿಸಲು ಸಮರ್ಥನಾಗಿರಬೇಕು. ಇದಕ್ಕೆ ಆ ಆದರ್ಶಗಳನ್ನು ಅವನು ಆತ್ಮಸಾತ್ ಮಾಡಿಕೊಂಡಿರಬೇಕಾಗುತ್ತದೆ. ಉದಾಹರಣೆಗಾಗಿ, ಅವರು ನಡೆಸುತ್ತಿರುವ ಬಹುಮುಖ ಚಟುವಟಿಕೆಗಳನ್ನು—ಖಾದಿ, ಗ್ರಾಮೋದ್ಯೋಗ, ಹರಿಜನ ಸೇವೆ, ಮೂಲ ಶಿಕ್ಷಣ, ಗೋಸೇವೆ, ಮತ್ತು ಕೊನೆಯದಾದರೂ ಕಡಿಮೆಯಲ್ಲದ ಆ ಆಶ್ರಮ—ಇವೆಲ್ಲವನ್ನು ನೋಡಿರಿ. ಅವರಿಗೆ ನಿಜವಾದ ಸಹಾಯಕರಾಗಬೇಕಾದರೆ ಅವರ ಕಾರ್ಯದರ್ಶಿಗೆ ಇವೆಲ್ಲದರ ತಾತ್ವಿಕ ತಿಳುವಳಿಕೆ ಮಾತ್ರವಲ್ಲ, ಅವುಗಳೊಡನೆ ಆತನು ಒಂದು ನಿಟ್ಟಿನ ವ್ಯಾವಹಾರಿಕ ತಾದಾತ್ಮ್ಯವನ್ನು ಕೂಡ ಸಂಪಾದಿಸಿರಬೇಕು. ಹೀಗೆ, ದಿವಂಗತ ಮಹಾದೇವಭಾಯಿಯವರಿಗೆ ನೂಲುವದೆಂದರೆ, ಅದೂ ತಕಲಿಯಲ್ಲಿ, ತಡೆಯಲಾರದ ಬಯಕೆಯಾಗಿತ್ತು. ಈ ಆಸಕ್ತಿಯ ತೀವ್ರತೆ "ಯಂಗ್ ಇಂಡಿಯಾ" ಮತ್ತು 'ಹರಿಜನ'ದ ಪುಟಗಳಲ್ಲಿ ಹೊಮ್ಮುತ್ತಿತ್ತು. ಬಕೀಟು ಕಸಬರಿಗೆಗಳ ಸೈನ್ಯದ ಮುಂದಾಳಾಗಿ ಒತ್ತಡದ ಕೆಲಸದ ನಡುವೆಯೂ ಮಗನವಾಡಿಯಿಂದ ಹೊರಬೀಳುತ್ತಿದ್ದುದನ್ನು ದಿನದಿನವೂ, ವಾರವಾರವೂ ನೋಡದವರಿಗೆ ಅವರ ಹರಿಜನ ಸೇವಾತುರ, ಗ್ರಾಮ ಸೇವಾತತ್ಪರತೆಗಳು ಗಾಂಧೀಜಿಯ ವಾರಪತ್ರಿಕೆಗಳಲ್ಲಿ ಹೊಮ್ಮುತ್ತಿರುವದರ ಯಥಾರ್ಥತೆ ತಿಳಿದು ಬರಬಹುದಾಗಿತ್ತು. ಇದರಿಂದಲೇ ಈ ವಿಷಯಗಳಲ್ಲಿ ಗಾಂಧೀಜಿಯ ವಿಚಾರಗಳನ್ನು ತಮ್ಮ ಲೇಖಗಳ ಮೂಲಕ ಮನವರಿಕೆಯಿಂದಲೂ ಕಸುವಿನಿಂದಲೂ ಜನರ ಮುಂದಿಡುವ ಶಕ್ತಿ ಅವರಿಗೆ ಬಂದಿತಲ್ಲದೆ, ಅವರ ಮೇಲ್ಪಂಕ್ತಿಯಿಂದ ಪ್ರಚೋದಿತರಾಗಿ ಕಾರ್ಯಕರ್ತರು ಗಾಂಧೀಜಿಯ ಚಟುವಟಿಕೆಗಳ ಈ ಶಾಖೆಗಳಲ್ಲಿ ಅಷ್ಟೇ ಆತುರದಿಂದ ಕೆಲಸ ಮಾಡುವಂತಾಯಿತು.

ಗಾಂಧೀಜಿ ಬಹಳ ನಿಷ್ಠುರ ಕಾರ್ಯನಿಯೋಜಕರು. "ಇದರಲ್ಲಿ ತಪ್ಪಬೇಡ" ಎಂಬುದು ಅವರ ಪದವಾಕ್ಯ. ನಿಮಗೆ ಯಾವದಾದರೊಂದು ಕಾರ್ಯವನ್ನು ಒಪ್ಪಿಸಿದಾಗ ಅದರ ದಾರಿಯಲ್ಲಿರುವ ತೊಡಕುಗಳ ನೆವ ಹೇಳಿ ಆ ಕೆಲಸ ಮಾಡಲು ತಪ್ಪಿದರೆ ಅವರೆಂದೂ ಕೇಳುವವರಲ್ಲ. ನೀವು ಮುಂದಾಲೋಚನೆ ಮಾಡಿ ಎಲ್ಲ ತೊಡಕುಗಳನ್ನು ಎದುರಿಸಲು ಸಿದ್ಧರಾಗಿರಬೇಕು. ಹೀಗಿದ್ದುದರಿಂದ ದಿವಂಗತ ದೇಸಾಯರು ರೇಲ್ವೆ ಪ್ರವಾಸ ಮಾಡುವಾಗ ಮೇಣದ ಬತ್ತಿಗಳನ್ನು ಜತೆಗೆ ಒಯ್ಯುತ್ತಿದ್ದರು. ಬಿಹಾರದಲ್ಲಿ ಅಂದಿನ ಹಳೆದಿನಗಳಲ್ಲಿ ಎಷ್ಟೋ ಬಾರಿ ರೇಲ್ವೆ ಡಬ್ಬಿಗಳಲ್ಲಿ ದೀಪಗಳಿರುತ್ತಿದ್ದಿಲ್ಲ. ಅಂಥ ಪ್ರಸಂಗಗಳಲ್ಲಿ ಅಥವಾ ದೀಪಗಳು ಕೆಟ್ಟು ನಂದಿಹೋಗಿಬಿಟ್ಟರೆ ಕೆಲಸ ಮಾಡಲು ತಡೆಯಾಗಬಾರದೆಂದು ಈ ಮೇಣದ ಬತ್ತಿಗಳು. ಒಂದು ಸಲವಂತೂ ಅವರು "ಯಂಗ ಇಂಡಿಯಾ"ಕ್ಕೆ ಬರೆಹಗಳನ್ನು ಗಾಂಧೀಜಿಯ ದ್ವಿತೀಯ ವರ್ಗದ ಡಬ್ಬಿಯ ಪಾಯಖಾನೆಯೊಳಗೆ ಕುಳಿತು ಬರೆದು ಸಿದ್ಧಗೊಳಿಸಬೇಕಾಯಿತು. ಗಾಂಧೀಜಿಗೆ ನಿದ್ದೆ ಮಾಡಲು ಸಾಧ್ಯವಾಗುವಂತೆ ಅವರ ಡಬ್ಬಿಯ ದೀಪವನ್ನು ನಂದಿಸಬೇಕಾಯಿತು. ಪತ್ರಿಕೆಯ ಉಳಿದ ಲೇಖಗಳನ್ನು ಸಿದ್ಧಗೊಳಿಸಿ ನಿರ್ದಿಷ್ಟ ಸಮಯದೊಳಗೆ ಟಪಾಲಿಗೆ ಹಾಕಬೇಕಾಗಿತ್ತು. ನಟ್ಟಿರುಳಲ್ಲಿ ಗಾಂಧೀಜಿ ಪಾಯಖಾನೆಗೆ ಬಂದಾಗ ನಾವಿಬ್ಬರು ಕಾಗದಗಳನ್ನು ಹರಡಿಕೊಂಡು ಕುಳಿತಿರುವದನ್ನು ಕಂಡು ಅವರಿಗೆ ಆಶ್ಚರ್ಯವಾಯಿತು. ಅವರು ನಮ್ಮನ್ನು ಗದರಿಸಿದರಾಗಲಿ, ಬರೆಯುವದನ್ನಂತೂ ಮುಗಿಸಿ, ಸರಿ... ನಿಲ್ದಾಣದಲ್ಲಿ ಮುಂದಿನ ವಾರದ "ಯಂಗ ಇಂಡಿಯಾ"ಕ್ಕೆ ಸಕಾಲದಲ್ಲಿ ಅಹಮದಾಬಾದಿಗೆ ... ವಂತೆ ಅದನ್ನು ಟಪಾಲಿಗೆ ಹಾಕಿಯೆ ಬಿಟ್ಟೆವು. ಅವರ ಅನೇಕ ವಾರಪತ್ರಿಕೆಗಳನ್ನು ನಡೆಸುವದರಲ್ಲಿ ಗಾಂಧೀಜಿಯೊಡನೆ ಮಹಾದೇವರಿಟ್ಟುಕೊಂಡಿದ್ದ ೨೫ ವರ್ಷಗಳ ಸಂಬಂಧದಲ್ಲಿ (ಈ ಅವಧಿಯಲ್ಲಿ ಬ್ರಹ್ಮದೇಶ, ಸಿಂಹಳ ಮತ್ತು ಇಂಗ್ಲಂಡಗಳಲ್ಲಿ ಅವರು ಪ್ರವಾಸ ಮಾಡಿದ್ದರು) ಆ ಪತ್ರಿಕೆಗಳ ಪ್ರಕಟನೆ, ಲೇಖಗಳು ಸಕಾಲದಲ್ಲಿ ಬಂದು ತಲಪದೆ ತಡವಾದ ಒಂದೇ ಒಂದು ಪ್ರಸಂಗ ಕೂಡ ನನ್ನ ನೆನಪಿಗೆ ಬರುವದಿಲ್ಲ.

(ಅಪೂರ್ಣ) — ಪ್ಯಾರೇಲಾಲ
ಹರಿಜನ ಚಾಲಕ

* * *

ದೊಡ್ಡ ದೊಡ್ಡ ನಗರಗಳಲ್ಲಿ ಕಸಗೂಡಿಸುವ ಹರಿಜನರು ಅಸಂಘಟಿತರಿರುವದರಿಂದ ನಗರ ಸಭೆಯವರು ಅವರನ್ನು ಶೋಷಿಸುತ್ತಾರೆ. ಇದು ಶೋಚನೀಯವು. ಹೆಚ್ಚು ಸಂಬಳ ಬೇಕಾದರೆ ಸಂಪು ಹೂಡುವದರ ಹೊರ್ತು ಅನ್ಯಮಾರ್ಗವಿಲ್ಲ. ಕಲಕತ್ತೆಯಲ್ಲಿ ದೊಡ್ಡ ಚಳವಳಿಯಾದ ನಂತರ ಕಸಗೂಡಿಸುವವರ ಸಂಬಳ ರೂ. ೧೫ ಕ್ಕೆ ಏರಿಸಲ್ಪಟ್ಟಿತು. ಚಿಕ್ಕಪುಟ್ಟ ನಗರಗಳಲ್ಲಿ ಅವರ ಸಂಬಳ ೭ ರೂ. ವರೆಗೂ ಇರುತ್ತದೆ. ತುಟ್ಟಿ ಭತ್ತೆ ೨ರಿಂದ ೫ ರೂ. ಕಲಕತ್ತ ಮತ್ತು ಮದ್ರಾಸದಂಥ ನಗರಗಳಲ್ಲಿ ಇವರಿಗೆ ಕೊಟ್ಟ ವಾಸಸ್ಥಾನಗಳು ಹೇಯವಾಗಿರುವವೆಂದು ಟೀಕಿಸಿದರೂ ಸೌಮ್ಯವೆನಿಸುತ್ತದೆ. ಸಂತೃಪ್ತರಾದ ಸ್ವಚ್ಛತಾ ಕೆಲಸಗಾರರು ನಗರಗಳಲ್ಲಿ ಅವಶ್ಯವಿರುವದರಿಂದ ಅವರಿಗೆ ಬಾಡಿಗೆಯಿಲ್ಲದ ಯೋಗ್ಯ ಮನೆಗಳನ್ನು ಒದಗಿಸಬೇಕು. ನಗರ ಸ್ವಚ್ಛತೆಗಾಗಿ ಗಟಾರಗಳನ್ನು ಎಷ್ಟು ಅವಶ್ಯವೋ ಅಷ್ಟು ಈ ಜನರಿಗೆ ಮನೆ ಒದವಿಸುವದೂ ಅವಶ್ಯವೆಂದು ನಗರ ಸಭೆಗಳು ತಿಳಿಯಬೇಕು.

# ಪ್ರಶ್ನೆ—ಪೆಟ್ಟಿಗೆ

ಪ್ರಶ್ನೆ— ಸಾಧ್ಯವಾದಷ್ಟು ಆಹಾರ ಸಾಮುಗ್ರಿಗಳನ್ನು ಆಯಾತ ಮಾಡುವದು ಅತ್ಯವಶ್ಯಕವಾಗಿದೆ. ಈಗಲೇ ಜನರಿಗೆ ಸಾಕಷ್ಟು ತಿನ್ನಲು ಸಿಗುವದಿಲ್ಲ. ಸೀದಾದಲ್ಲಿ ಇನ್ನೂ ಕಡಿತ ಮಾಡುವದು ಅಪಾಯಮಯವಾಗಿದೆ. ಆದರಿಂದ ಜನರ ಪುಷ್ಟಿ ಇನ್ನಷ್ಟು ಕಡಿಮೆಯಾಗಿ ಅವರು ರೋಗರುಜಿಗಳಿಗೆ ಸುಲಭವಾಗಿ ಬಲಿಬೀಳುವರು. ಅದು ಅನ್ನ-ದಂಗೆಗಳಿಗೆ ಕೂಡ ಕಾರಣವಾಗಬಹುದು. ಉತ್ಪಾದನೆಯನ್ನು ಹೆಚ್ಚಿಸುವದಂತೂ ಸರ್ವಥಾ ಅಸಾಧ್ಯವಲ್ಲದಿದ್ದರೂ ಈ ಸ್ಥಿತಿಯಲ್ಲಿ ಅತ್ಯಂತ ಕಠಿನವಾಗಿದೆ.

ಉತ್ತರ:— ಮೇಲೆ ನಿರೂಪಿಸಿದ ಅಭಿಪ್ರಾಯವುಳ್ಳವರು ಎಷ್ಟೋ ಜನ ಇದ್ದಾರೆಂದು ನಾನು ಬಲ್ಲೆ. ಆದರೆ ಆ ವಾದ ನನಗಿನ್ನೂ ಮನದಟ್ಟಾಗಿಲ್ಲ. ಈಗಾಗಲೆ ಸಾಕಷ್ಟು ತಿನ್ನಲು ಸಿಗದಿರುವಾಗ ತಮ್ಮ ಸೀದಾದಲ್ಲಿ ಇನ್ನಷ್ಟು ಕಡಿತವಾದರೆ ಜನರಿಗೆ ಅದು ಅಸಹನೀಯವಾಗುವದು. ಆದರೆ, ನನ್ನಂತೆ, ಸರಕಾರ ಕೊಡುವ ಅಂಕಗಳು ಸರಿಯಾಗಿವೆಯೆಂದು ನಾವೆಲ್ಲರೂ ಅಂಗೀಕರಿಸಿದರೆ ಈ ಕಹಿಗುಳಿಗೆಯನ್ನು ನುಂಗಿಕೊಂಡು ಜನರಿಗೂ ಹಾಗೆಯೇ ಮಾಡಲು ಪ್ರಾರ್ಥಿಸಿಕೊಳ್ಳುವದು ಅರ್ಥಾತ್ ಮುಂದಿನ ಸುಗ್ಗಿಯ ವರೆಗೂ ಬಾಳುವಂತೆ ನಾವೆಲ್ಲರೂ ಕಡಿಮೆ ಉಣ್ಣುವದು, ದೂರದೃಷ್ಟಿ ಮತ್ತು ಕರ್ತವ್ಯದ ಆದೇಶವಾಗುತ್ತದೆ. ಇಂದು, ಆಡಳಿತೆಯ ಲಂಚಗುಳಿತನದಿಂದಾಗಿ, ಸೀದಾ ಪದ್ಧತಿಯನ್ವಯ ನ್ಯಾಯವಾದ ಪಾಲು ಕೂಡ ಜನತೆಗೆ ಸಿಗುವದಿಲ್ಲ. ಇದನ್ನು ಸರಿಮಾಡುವದು ಸಾಧ್ಯವಾದರೆ ದೊಡ್ಡ ಸಿದ್ಧಿಯೇ ಸರಿ. ಆಗ ಪ್ರತಿಯೊಬ್ಬನಿಗೂ ಅಥವಾ ಒಬ್ಬಳಿಗೂ ಅವನ ಅಥವಾ ಅವಳ ಪಾಲು ಸುಲಭವಾಗಿಯೂ ನಿಜವಾಗಿಯೂ ದೊರಕುವದು. ಮೇಲಾಗಿ ಒಂದು ವೇಳೆ ಸರಕಾರದ ಅಂಕಿಗಳು ತಪ್ಪಾಗಿವೆಯೆಂದು ನಂಬಿ ನಾವು ಸೀದಾ ಹೆಚ್ಚಳಕ್ಕಾಗಿ ಚಳವಳಿಯನ್ನು ಮುಂದೆ ಸಾಗಿಸಿದರೆ ಮತ್ತು ಸರಕಾರ ನಮ್ಮ ಬೇಡಿಕೆಯನ್ನು ಮನ್ನಿಸಿದರೆ, ಮುಂದಿನ ಸುಗ್ಗಿ ಮನೆಗೆ ಬರುವ ಮೊದಲೇ ನಮ್ಮಲ್ಲಿ ಏನೂ ಸಂಗ್ರಹವಿಲ್ಲದ ಕಾಲವೊಂದು ಬರುವದು; ಮತ್ತು ಬಡವರು ಅಕಾಲ ಮೃತ್ಯುವಿಗೆ ಬಲಿಯಾಗಬೇಕಾಗುವದು. ಅಂಥ ಅನಾಹುತವನ್ನು ತಡೆಯಲು ನಾವು ಮೊದಲೇ ಜಾಗರೂಕರಾಗಿರತಕ್ಕದ್ದು. ಆದುದರಿಂದ ಸದ್ಯದ ಸೀದಾದಲ್ಲಿ ಕಡಿತವಾಗುವದನ್ನು ಸಹಿಸುವದೇ ಜಾಣತನ.

ಸರ... ಇನ್ನುಳಿದ ಆಹಾರ ವಸ್ತುಗಳ ಬೆಳೆಯನ್ನು ಹೆಚ್ಚಿಸುವದು ಅಸಾಧ್ಯವೆಂದು ನಾನೆಣಿಸುವದಿಲ್ಲ. ಅದು ಕಠಿನಸಾಧ್ಯವೆಂದು ನಾನು ಒಪ್ಪುವೆ. ಆದರೆ ನಮ್ಮಲ್ಲಿ ತಿಳಿವಳಿಕೆ ಮತ್ತು ಚಾತುರ್ಯ ಸಾಕಷ್ಟಿಲ್ಲದಿರುವದೇ ನಮ್ಮ ತೊಡಕಿನ ಮೂಲ. ನಾವೆಲ್ಲರೂ ಆಶಾವಾದಿಗಳಾಗಿ, ಧೈರ್ಯದಿಂದ ವೈಯಕ್ತಿಕ ಪ್ರಯತ್ನದಿಂದ ನಮ್ಮ ಕೈಲಾದಷ್ಟು ಆಹಾರವನ್ನು ಬೆಳೆಸಲು ಒಡನೆ ತೊಡಗಿದರೆ, ಬಹಳಮಾಡಿ ಜನರಿಗೆ ಹೆಚ್ಚು ಸಮತೂಕವಾದ ಆಹಾರ ತತ್ವಗಳನ್ನೊದಗಿಸಲು ಬೇಗನೆ ಸಮರ್ಥರಾಗಬಹುದು, ಮತ್ತು ಕಡಿತದ ಸೀದಾದ ಅವಧಿಯನ್ನೂ ಇಳಿಸಬಹುದು.

ನನ್ನ ಆಶಾವಾದ ಅದಮ್ಯವಾದುದು. ಆದರೂ ಸರಕಾರದ ಮತ್ತು ಜನತೆಯ ಹೃತ್ಪೂರ್ವಕ ಸಹಕಾರವಿಲ್ಲದಿದ್ದರೆ ಯಾವುದೂ ಸಾಧ್ಯವಿಲ್ಲವೆಂದು ನಾನು ಒಪ್ಪುವೆ. ಅದಿಲ್ಲದೆ ಹೋದರೆ ಆಯಾತ ಮಾಡಿದ ಆಹಾರ ಕೂಡ ಅಪವ್ಯಯವಾಗಬಹುದು. ಇಲ್ಲವೆ ಅಯೋಗ್ಯವಾಗಿ ಹಂಚಲ್ಪಟ್ಟೀತು. ಸಾಲದ್ದಕ್ಕೆ ನಾವಿನ್ನೂ ಸ್ವತಂತ್ರರಾಗಿಲ್ಲ. ಹೊರಗಿನ ಸಹಾಯವನ್ನು ಅವಲಂಬಿಸಿದರೆ ನಾವು ಇನ್ನಷ್ಟು ಪರತಂತ್ರರಾಗುವೆವು. ಅವುಗಳ ಮೇಲೆಯೇ ಹೊಂದಿಕೊಂಡಿರದಿದ್ದರೂ ಹೊರಗಿನಿಂದ ಆಹಾರ ಆಯಾತ ಬಂದೇಬಿಟ್ಟರೆ, ನಾವು ಅದನ್ನು ಕೃತಜ್ಞತೆಯಿಂದ ಸ್ವೀಕರಿಸಿ ಅದರ ಯೋಗ್ಯ ಉಪಯೋಗ ಮಾಡಿಕೊಳ್ಳೋಣ. ಹೊರಗಿನಿಂದ ಆಹಾರ ತರಿಸುವದು ಸರಕಾರದ ಕರ್ತವ್ಯವಾಗಿದ್ದರೂ ಸರಕಾರವನ್ನಾಗಲೀ ವಿದೇಶಗಳನ್ನಾಗಲಿ ಅವಲಂಬಿಸುವುದು ಒಳಿತೆಂದು ನನಗೆನಿಸುವದಿಲ್ಲ. ಅಲ್ಲಿಟ್ಟ ಆಶೆ ಬಯಲಾದರೆ ನಮ್ಮ ಜನರ ಧೃತಿಗೆ ಈ ಕಷ್ಟಕಾಲದಲ್ಲಿ

# ಅಯ್ಯೊ! ನಮ್ಮ ಇಂಗ್ಲೀಷೆ!!

ನಮ್ಮ ಭಾಷೆಯಲ್ಲಿಯೇ ವೃತ್ತಪತ್ರಿಕೆಗಳಿದ್ದರೆ ಅದೆಷ್ಟು ಸೊಗಸಾಗುತಿತ್ತು. ಆನೆಯ ಬಾಲ, ಕೋರೆ, ಸೊಂಡಿಲುಗಳ ಮೇಲೆ ಕೈಯಾಡಿಸಿ ಇವುವೇ ಆನೆಯೆಂದು ತಪ್ಪಾಗಿ ನಂಬಿದ ಕುರುಡರಂತೆ ನಮ್ಮ ಪರಿಸ್ಥಿತಿಯಾಗುತಿದ್ದಿಲ್ಲ. ಅದರಂತೆ ನಾನಾದರೂ ನನ್ನ ಸಂಕುಚಿತ ದೃಷ್ಟಿ ಮೂಲಕ, ರಾಜಾಜಿಯನ್ನು ವಿರೋಧಿಸುವ ಒಂದು 'ಗುಂಪು' ಇದೆಯೆಂದು ಹೇಳಿದೆನು. ವಿರೋಧಿಗಳಿಗೆ ಹೀಗೆ ಹೆಸರಿಟ್ಟು ನಾನು ಮಹಾಪರಾಧ ಮಾಡಿದೆನೆಂದು ಓರ್ವ ಸನ್ಮಾನ್ಯ ಮಿತ್ರನು ಮತ್ತು ಇತರರು ಅಭಿಪ್ರಾಯಪಟ್ಟಿದ್ದಾರೆ. ಆದರೆ ನಾನು ಕಾಂಗ್ರೆಸ ಸಂಸ್ಥೆಯನ್ನುದ್ದೇಶಿಸಿ ಆ ಶಬ್ದಪ್ರಯೋಗವನ್ನು ಮಾಡಿರುವದಿಲ್ಲ. ಮತ್ತು ಮಾಡಿರಲಿಕ್ಕೂ ಸಾಧ್ಯವಿಲ್ಲ. ಏಕೆಂದರೆ ಕಾಂಗ್ರೆಸ ಸಂಸ್ಥೆ ಅದು ಕೇಂದ್ರವಿರಲಿ, ಪ್ರಾಂತಿಕವಿರಲಿ ಅಥವಾ ಬೇರಾವುದಾದರೂ ಇರಲಿ, ಅದು ಅರಸನಂತೆ ತಪ್ಪು ಮಾಡಲಾರದು. ಗುಂಪು ಮಾತ್ರ ಸಾಮಾನ್ಯವಾಗಿ ತಪ್ಪು ಮಾಡುತ್ತದೆ. ಆದರೂ ನಮ್ಮ ನಮ್ಮ ದೃಷ್ಟಿಯಿಂದ ನನ್ನದೂ ಸರಿ, ನನ್ನ ಟೀಕಾಕಾರದೂ ಸರಿ. ಮತ್ತು ಇಬ್ಬರೂ ತಪ್ಪು ಮಾಡಿರುತ್ತೇವೆ. ವಿದೇಶಿ ಶಬ್ದವೊಂದನ್ನು ಉಪಯೋಗಿಸಿದ್ದರಿಂದ ಇಷ್ಟು ತೊಂದರೆಯಾಯಿತು. ಅದನ್ನೇ ನಮ್ಮ ರಾಷ್ಟ್ರೀಯ ಅಥವಾ ಮಾತೃಭಾಷೆಯಲ್ಲಿ ಬರೆದಿದ್ದರೆ ಒಂದು ಶಬ್ದದ ಬಗ್ಗೆ ನಾವು ಹೀಗೆ ಜಗಳವಾಡುತ್ತಿರಲಿಲ್ಲ. ನಾನಿಷ್ಟೇ ಹೇಳಿ, ರಾಜಾಜಿ ಪ್ರಕರಣವನ್ನು ಮುಕ್ತಾಯಗೊಳಿಸುತ್ತೇನೆ. ಆ ಶಬ್ದ ಪ್ರಯೋಗದಿಂದ ಅಥವಾ ರಾಜಾಜಿಯ ಯೋಗ್ಯತೆ ಅಳೆಯುವಲ್ಲಿ ನಾನು ತಪ್ಪು ಮಾಡಿದ್ದರೆ, ನನ್ನ ಮಾತನ್ನು ಕೇಳಬೇಡಿ. ನನಗೆ ಅಧಿಕೃತವಾಗಿ ಯಾವ ಅಧಿಕಾರವೂ ಇಲ್ಲ. ಹಾನಿ ನನ್ನದೇ ಆಗುತ್ತದೆ. ನನ್ನ ನೈತಿಕ ವರ್ಚಸ್ಸನ್ನು ಬಹಳವಾಗಿ ಇಲ್ಲವೆ ಕೆಲವು ಭಾಗವನ್ನಾದರೂ ಕಳೆದುಕೊಂಡಂತಾಗುವದು.

ಆದರೆ ಗೋಸೇವಾ ಸಂಘದಲ್ಲಿ ನಾನು ಮಾಡಿದ ಹಿಂದುಸ್ತಾನಿ ಭಾಷಣವನ್ನು ಇಂಗ್ಲೀಷದಲ್ಲಿ ಭಾಷಾಂತರಿಸುವಾಗ, ನಾನು ಹೇಳಿದುದರ ಅರ್ಥವು ಪೂರ್ಣ ವಿರುದ್ಧವಾಗುವಂತೆ ಮಾಡಿದ ಸುದ್ದಿಗಾರರ ವಿಷಯದಲ್ಲಿ ಸದ್ಯ ನನ್ನ ತಕರಾರು ಇದೆ. ನಾನು ಸಲ್ಲಿಸಿದ ಧಾರಾಳ ಅಭಿನಂದನೆಯು ಅಪಾರ್ಥವಾಗಿಬಿಟ್ಟಿದೆ. ನ್ಯಾ ರಾನಡೆಯವರ ಪತ್ನಿ ಅವರ ವಾರಸದಾರಳಾದಂತೆ ಜಾನಕೀಬಾಯಿಯು ಸಹ ಸ್ವರ್ಗೀಯ ಜಮುನಾಲಾಲಜಿಯವರ ವಾರಸದಾರಳಾಗುವಳು ಎಂದು ನಾನು ಹೇಳುವಾಗ, ಇಲ್ಲದಿದ್ದರೆ ಎಂದು ಅರ್ಥ ಸೂಚಿಸುವ ರೇ—ಕಾರವನ್ನು ಉಪಯೋಗಿಸಲಿಲ್ಲ. ಜಾನಕಿಬಾಯಿಯ ನಂತರ ಅವರ ಮಕ್ಕಳು ವಾರಸದಾರರಾಗುವರು. ಅವರು ಒಂದು ವೇಳೆ ಮುಂದೆ ಬರದಿರಬಹುದು ಆಗ ದಿವಂಗತರ ನೆನಪಿಗಾಗಿ ಇಲ್ಲಿ ಸೇರಿದ ನಾವು, ಅವರ ಧ್ಯೇಯ ವಾದಿಗಳಿದ್ದರೆ ಮುಂದಿನ ವಾರಸದಾರರಾಗುವೆವು. ನಮ್ಮ ವಾರಸತನವು ನಮ್ಮ ಒಪ್ಪಿಗೆಯಿಂದ ಬಂದುದಲ್ಲದೆ, ಬಾಂಧವ್ಯದಿಂದಲ್ಲ. ಆದುದರಿಂದ ಹಿಂದುಸ್ತಾನಿಯಲ್ಲಿಹೇಳಿದ ಈ ಅರ್ಥದ ನನ್ನ ಮಾತುಗಳು ದಿವಂಗತ ಜಮುನಾಲಾಲಜಿಯವರ ವಿಧವೆ ಹಾಗೂ ಮಕ್ಕಳಿಗೂ ಅಂದು ಅಲ್ಲಿ ಸೇರಿದ ಸಭಿಕರಿಗೂ ತಿಳಿಯದೆ ಹೋಗಿಲ್ಲವೆಂದು ನನಗೆ ವಿಶ್ವಾಸವಿದೆ. ಉದಾತ್ತ ಧ್ಯೇಯದ ಸಾಧನೆಯಲ್ಲಿ, ಸಾಧಕರೆಲ್ಲರೂ ವಾರಸದಾರರಾಗುವರು. ಇದನ್ನು ಪರಭಾಷೆಯಲ್ಲಿ ಕಳಿಸುವಾಗ ಅದರ ಸೌಂದರ್ಯವೇ ಅಳಿಸಿ ಹೋಯಿತೆಂದು ಕೇಳಿ ನನಗೆ ಸಂತೋಷವಾಯಿತು. ಅದೇ, ಹಿಂದುಸ್ತಾನಿಯಲ್ಲಿ ಕಳಿಸಿದ್ದರೆ ಓದುಗರಿಗೆ ನಿಜವಾದ ಅರ್ಥ ತಿಳಿದು ಅವರ ಮನ ಮುಟ್ಟುತಿತ್ತು.

ಆ ವರದಿಯನ್ನು ಪೂರ್ಣವಾಗಿ ಓದುವದು ನನ್ನಿಂದಾಗಿಲ್ಲ. ಆದುದರಿಂದ ಆ ಸಭೆಯಲ್ಲಿ ನಾನು ಮುಂದಿಟ್ಟ ಇನ್ನೂ ಎರಡು ವಿಚಾರಗಳನ್ನು ಇಲ್ಲಿ ಹೇಳಬಯಸುತ್ತೇನೆ. ಪಶುಪಾಲನೆಯು ಹಿಂದುಸ್ತಾನದ ಮಹಾ ಸಮಸ್ಯೆಗಳಲ್ಲೊಂದು. ಹಣ ಸುರಿದು ಅಥವಾ ಭಾಷಣ ಮಾಡಿ ಅದನ್ನು ಬಿಡಿಸಲಾರೆವು. ಪಶುಪಾಲನೆಗೆ ಬದ್ಧಕಂಕಣರಾದ ಅನೇಕ ತಜ್ಞರನ್ನು ನೇಮಿಸಿಕೊಂಡರೆ ಹಾಗೂ ವ್ಯಾಪಾರಿ ವರ್ಗದವರು ಸ್ವಾರ್ಥದ ಆಶೆಯಿಲ್ಲದೆ ಇದಕ್ಕಾಗಿ ಧನ ಕೊಟ್ಟರೆ ಮಾತ್ರ ಸಾಧ್ಯ. ಇವರೆಲ್ಲರೂ ಸೇರಿ ಪಶುಪಾಲನೆಯಲ್ಲಿ ತೊಡಗಿದರೆ, ಹಿಂದುಸ್ತಾನಕ್ಕೆ ಅಪಾರ ಸೇವೆ ಸಲ್ಲಿಸಿದಂತಾಗುವದು- ಅತಿ ವಿಶಾಲವಾದ ಈ ಸಮಸ್ಯೆ ನೋಡಿ ಗಾಬರಿಯಾಗಬೇಕಿಲ್ಲ. ಪ್ರತಿಯೊಬ್ಬನು ಏನು ಮಾಡಬಹುದೆಂಬದನ್ನು ನಿರ್ಧರಿಸಿಕೊಂಡು, ನೆರೆಯವರು ಮಾಡಲಿ ಅಥವಾ ಬಿಡಲಿ, ಅದನ್ನು ತಾನು ಅಚ್ಚುಕಟ್ಟಾಗಿ ಮಾಡಬೇಕು. ಮಧ್ಯವರ್ತಿ ಮಂಡಲದವರು ಹಾಲಿನ ಉತ್ಪಾದನೆ ಹಾಗೂ ವರ್ಧಾ ನಗರಕ್ಕೆ ಅದನ್ನು ಸೋವಿಯಲ್ಲಿ ಪೂರೈಸುವ ಕಾರ್ಯಕ್ಕೆ ಹೆಚ್ಚು ಗಮನ ಕೊಡಬೇಕು. ಹೀಗೆ ಮಾಡಿದಲ್ಲಿ ಪಶುಪಾಲನೆಯ ದೊಡ್ಡ ಸಮಸ್ಯೆಯನ್ನು ಬಿಡಿಸಲಾಯಿತೆಂದು ಕೊನೆಯಲ್ಲಿ ಕಂಡುಬರದಿರಲಾರದು.

ನಿಶ್ಚಯವಾಗಿ ಹಾನಿಯಾಗುವದು. ಆದರೆ ಜನರು ಒಗ್ಗಟ್ಟಾಗಿ, ಪರಮಾತ್ಮನಿಂದಲ್ಲದೆ ಬೇರಾರಿಂದಲೂ ಸಹಾಯ ಬೇಡುವದಿಲ್ಲವೆಂದು ಮನಸು ಗಟ್ಟಿಮಾಡಿದರೆ, ಮತ್ತು ಸರಕಾರದವರು ಮಾಡಬಹುದಾದ ಉಪಯುಕ್ತ ನಿಯಮಗಳನ್ನು ವಿರೋಧಿಸದಿದ್ದರೆ, ನಿರಾಶೆಗೇನೂ ಅವಕಾಶ ಬರಲಾರದು. ಅಂಥ ಕ್ರಿಯೆಯಿಂದಾಗಿ ಜನರು ಈ ಅಗ್ನಿಪರೀಕ್ಷೆಯಿಂದ ಬಲಿಷ್ಠರಾಗಿ ಹೊರಬರುವರು. ಆಗ ವಿದೇಶಗಳೂ ತಾವಾಗಿಯೆ ತಮ್ಮಲ್ಲಿ ಉಳಿದಿರಬಹುದಾದ ಆಹಾರವನ್ನು ನಮಗೆ ಕಳಿಸುವದು ತಮ್ಮ ಕರ್ತವ್ಯವೆಂದು ಭಾವಿಸುವವು. ಸ್ವಾವಲಂಬಿಗೆ ದೇವರೇ ಸಹಾಯ ನೀಡುವನು. ಉಳಿದವರು ಸ್ವಾವಲಂಬಿಗೆ ಸಹಾಯ ನೀಡಲಾರೆವೆನ್ನುವರಾದರೂ ಹೇಗೆ? ಬ್ರಿಟಿಶ ಸರಕಾರದವರು ತಮಗೆ ಅವಶ್ಯವಿದ್ದಾಗ ಹಿಂದುಸ್ತಾನದಲ್ಲಿದ್ದುದನ್ನೆಲ್ಲ ಒಯ್ದುಬಿಟ್ಟರು. ಅವರ ಕೃತಿಯ ಪರಿಣಾಮವನ್ನು ನಾವೀಗ ಅನುಭವಿಸಬೇಕಾಗಿದೆ. ಅಂದ ಮೇಲೆ ಅವರಿಗಾಗಲಿ ಅವರು ಹಿಂದುಸ್ತಾನದ ಸಂಪತ್ತಿಯನ್ನು ಸೂರೆಗೆಯ್ದು ಸಹಾಯ ನೀಡಿದವರಿಗಾಗಲಿ ಹಿಂದುಸ್ತಾನದ ವಿಷಯದಲ್ಲಿ ಈಗ ಅವರ ಕರ್ತವ್ಯವನ್ನು ಹೇಳಿಕೊಡುವದು ಅವಶ್ಯವಿದೆಯೆ?

ಪ್ರಶ್ನೆ— ಹಿಂದುಸ್ತಾನ ಸಾಕಷ್ಟು ಹತ್ತಿ ಬೆಳೆಯುವದಿಲ್ಲ. ಅದನ್ನು ಆಫ್ರಿಕೆಯಿಂದಲೂ ಅಮೇರಿಕೆಯಿಂದಲೂ ಆಯಾತ ಮಾಡಬೇಕಾಗುತ್ತದೆ. ರೈತರಿಗೆ ಹತ್ತಿ ಬೆಳೆಯಗೊಡುವದಿಲ್ಲ, ಅವರು ಹೆಚ್ಚು ಆಹಾರ ಬೆಳೆಯಬೇಕೆಂಬ ಕಾರಣ ಕೊಡಲಾಗುತ್ತಿದೆ.

ಉತ್ತರ— ಇದು ಹತ್ತಿಯನ್ನು ಸ್ವಂತ ಉಪಯೋಗಕ್ಕೆ ಬೆಳೆಸುವವರಿಗೆ ಅನ್ವಯಿಸುವದಿಲ್ಲ. ಹಣದ ಬೆಳೆಯೆಂದು ಹತ್ತಿಯನ್ನು ಬೆಳೆಸುವವರಿಗಷ್ಟೆ ಅದು ಅನ್ವಯಿಸಬಲ್ಲದು. ಹತ್ತಿಯನ್ನು ವ್ಯಾಪಾರದ ಸರಕಾಗಿ ಮಾಡಿ ಸರಕಾರ ಮಹಾಪರಾಧ ಮಾಡಿದೆ. ಈ ಪಾಪವನ್ನು, ಹತ್ತಿಯನ್ನು ಆಯಾತ ಮಾಡುವ ಮೂಲಕ ತೊಳೆಯಬರುವದಿಲ್ಲ. ಅದು ಅನ್ಯಾಯವನ್ನು ಇನ್ನಷ್ಟು ಗುರುತರವಾಗಿ ಮಾತ್ರ ಮಾಡಬಲ್ಲದು. ಹತ್ತಿಯ ನಿರ್ಯಾತವನ್ನು ಮಾಡಿದ್ದು ಕೇವಲ ಲೆಂಕೇಶಾಯರದ ಹಿತಾರ್ಥವಾಗಿ. ಹೀಗೆ ಅದು ಅಸ್ವಾಭಾವಿಕವಾಗಿ ವ್ಯಾಪಾರಿ ಸರಕಾಗಿ ಬಿಟ್ಟಿತು. ಯುದ್ಧಕಾಲದಲ್ಲಿ ಆಹಾರೋತ್ಪಾದನೆಯ ಹಿತಕ್ಕಾಗಿ ಕೆಲವೆಡೆ ಹತ್ತಿಬೆಳೆಯ ವಿಶಾಲ ಕ್ಷೇತ್ರವನ್ನು ಕಡಿಮೆ ಮಾಡುವದನ್ನು ನಾನು ಅರ್ಥಮಾಡಿಕೊಳ್ಳಬಲ್ಲೆ. ಆದರೆ ಹತ್ತಿಬೆಳೆಯುವದನ್ನು ಸರ್ವಥಾ ಪ್ರತಿಬಂಧಿಸಿ ನಮಗೆ ಬೇಕಾದುದಕ್ಕೆ ಹೊರಗಿನ ಆಯಾತದ ಮೇಲೇ ನಿರ್ಭರರಾಗಿರುವದು ಆಹಾರ ಕೊರತೆಗೆ ಉಪಶಮನವಲ್ಲ. ಸಾಧ್ಯವಿದ್ದಲ್ಲೆಲ್ಲ ತಮ್ಮ ಸ್ವಂತ ಉಪಯೋಗಕ್ಕೆ ಜನರು ಹತ್ತಿ ಬೆಳೆಯಬೇಕು. ಹಿಂದೀ ಗಿರಣಿಗಳ ಉಪಯೋಗಕ್ಕಾಗಿ ಹೊರಗಿನಿಂದ ಹತ್ತಿ ಆಯಾತ ಮಾಡುವ ಧೋರಣೆಯನ್ನು ನಾನು ತಿಳಿದುಕೊಳ್ಳಬಲ್ಲೆ, ಸಹಿಸಲೂ ಬಲ್ಲೆ. ಆದರೆ ವ್ಯಕ್ತಿಯ ಸ್ವಂತ ಉಪಯೋಗಕ್ಕೆ ಹತ್ತಿ ಬೆಳೆಯುವದನ್ನು ಪ್ರತಿಬಂಧಿಸುವದು ಧೋರಣೆಯಾಗಿದ್ದರೆ ಅದು ಸರ್ವಥಾ ಅರ್ಥರಹಿತವಾಗುವದು. ಆದುದರಿಂದ ಅದನ್ನು ಬಲವತ್ತರವಾಗಿ ಪ್ರತಿಭಟಿಸಬೇಕು. ಇದು ಸರಕಾರದ ಮತ್ತು ಜನತೆಯ ಗಮನಕ್ಕೆ ಅರ್ಹವಾಗಿದೆ.

ಸೇವಾಗ್ರಾಮ                ಮೋ. ಕ. ಗಾಂಧಿ
೧೬-೨-೪೬

# ದೇವರೆಂದರೇನು ?

ಒಬ್ಬನು ಹೀಗೆ ಬರೆದಿದ್ದಾನೆ—

"ನಾನು ಇತ್ತೀಚೆಗೆ ನಿಮ್ಮ 'ಗೀತಾಬೋಧ' ವನ್ನು ಓದುತ್ತಿದ್ದೇನೆ, ಅರ್ಥ ಮಾಡಿಕೊಳ್ಳಲೂ ಪ್ರಯತ್ನಿಸುತ್ತಿದ್ದೇನೆ. ಆದರೆ ೧೦ ನೇ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಚದುರಂಗದಾಟದಲ್ಲಿ ವಿಜಯಿ ಅಷ್ಟಕಗಳೆರಡೂ ನಾನೆ. ಈ ಜಗತ್ತಿನಲ್ಲಿ ನನ್ನಿಚ್ಛೆಯ ಹೊರತು ಒಳಿತಾಗಲಿ ಕೇಡಾಗಲಿ ಸಂಭವಿಸುವದಿಲ್ಲ ಎಂದು ನುಡಿದದ್ದನ್ನು ಕೇಳಿ ದಿಙ್ಮೂಢನಾಗಿದ್ದೇನೆ. ಅಂದರೆ ದೇವರು ಕೇಡನ್ನು ತಡೆಯುವನೊ ? ಹಾಗಿದ್ದರೆ ಅವನು ಕೇಡಿಗನನ್ನು ಹೇಗೆ ದಂಡಿಸುವನು ? ಈ ಉದ್ದೇಶಕ್ಕಾಗಿಯೆ ದೇವರು ಸೃಷ್ಟಿಯನ್ನು ಸೃಷ್ಟಿಸಿರುವನೊ ? ಮಾನವ ಜನಾಂಗವು ಶಾಂತತೆಯಲ್ಲಿರುವದೆ ಅಸಾಧ್ಯವೋ ?"

ದೇವರು ಕೇಡನ್ನು ನಡೆಯಗೊಡುತ್ತಾನೆಂದು ಹೇಳುವದು ಕಿವಿಗೆ ಹಿತವಾಗಲಾರದು. ಒಳಿತಿಗೆ ಅವನೇಹೊಣೆಯೆಂದಿಟ್ಟುಕೊಂಡಮೇಲೆ ಕೇಡಿಗೂ ಅವನೆ ಹೊಣೆ ಎಂದಾಯಿತು. ದೇವರು ರಾವಣನಿಗೆ ಅದ್ವಿತೀಯ ಸಾಮರ್ಥ್ಯವನ್ನು ಮೆರೆಸಲು ಅವಕಾಶ ಕೊಡಲಿಲ್ಲವೆ ? ದೇವರನ್ನು ಕುರಿತು ನಿಜವಾದ ಅರಿವಿಲ್ಲವೆಂಬುದೇ ಈ ದಿಙ್ಮೂಢತೆಯ ಮೂಲ ಕಾರಣವಾಗಿದೆ. ದೇವರು ಒಂದು ವ್ಯಕ್ತಿ ಅಲ್ಲ. ಅವನು ವರ್ಣನಾತೀತನಿದ್ದಾನೆ. ಅವನೇ ನಿಯಂತ, ನಿಯಮ ಮತ್ತು ಕಾರ್ಯವಾಹಕನಾಗಿದ್ದಾನೆ. ಯಾವ ಮಾನವನೂ ಈ ಗುಣಗಳನ್ನು ತನಗೆ ಆರೋಪಿಸಿಕೊಳ್ಳಲಾರನು. ಒಂದು ವೇಳೆ ಅವನು ಹಾಗೆ ಮಾಡಿದರೆ ಅವನನ್ನು ಶ್ರೇಷ್ಠತಮ ಸರ್ವಾಧಿಕಾರಿಯೆಂದು ಗುರುತಿಸಲಾಗುತ್ತದೆ. ನಾವು ದೇವರೆಂದು ಪೂಜಿಸುವವನಿಗೆ ಈ ಗುಣಗಳು ಒಪ್ಪುತ್ತವೆ. ಇದೆ ನಿಜ ಸ್ಥಿತಿ. ಇದನ್ನು ಸ್ಪಷ್ಟವಾಗಿ ಅರಿತರೆ ಮೇಲೆ ಕೇಳಲಾದ ಪ್ರಶ್ನೆಗಳಿಗೆ ಉತ್ತರ ದೊರೆಯುವದು.

ಮಾನವ ಜನಾಂಗವು ಶಾಂತತೆಯಲ್ಲಿರಬಹುದೊ ಎಂಬ ಪ್ರಶ್ನೆಯು ಮೇಲೆ ಉದ್ಧರಿಸಿದ ಶ್ಲೋಕದಿಂದ ಹುಟ್ಟುವದಿಲ್ಲ. ಜಗತ್ತಿನ ವ್ಯಕ್ತಿಗಳು ಶಾಂತತೆಯಿಂದಿರುವ ನಿರ್ಧಾರ ಮಾಡಿದರೆ ಮಾತ್ರ ಜಗತ್ತು ಶಾಂತತೆಯಲ್ಲಿರಬಲ್ಲದು. ಇದು ಅಸಾಧ್ಯವೆಂದಾಗಲಿ, ಎಂದು ಸಾಧಿಸುವದೆಂಬುದನ್ನಾಗಲಿ ಯಾರೂ ಹೇಳಲಾರರು. ಇಂಥ ಪ್ರಶ್ನೆ ಕೇಳುವದರಿಂದ ಸುಮ್ಮನೆ ವೇಳೆ ಹಾಳಾಗುತ್ತದೆ. ಉತ್ತಮನಿಗೆ ಇಡೀ ಜಗತ್ತೇ ಉತ್ತಮ. ಈ ಬಂಗಾರದಂಥ ನಿಯಮವನ್ನರಿತು ನಮ್ಮ ಪೃಚ್ಛಕನು ಎಂಥ ಪರಿಸ್ಥಿತಿಯಲ್ಲಿಯೂ ಶಾಂತಚಿತ್ತನಾಗಿ ಬಾಳಬಹುದು. ತನಗೆ ಸಾಧ್ಯವಿದ್ದದ್ದು ಇತರರಿಗೂ ಸಾಧ್ಯವೆಂಬುದನ್ನು ಅವನು ಅರಿತುಕೊಳ್ಳಲಿ. ತದ್ವಿರುದ್ಧವಾಗಿ ಭಾವಿಸುವದು ಔದ್ಧತ್ಯ ಗರ್ವಗಳ ದ್ಯೋತಕವಾಗುವದು.

ಸೇವಾಗ್ರಾಮ                --ಮೋ ಕ ಗಾಂಧಿ
೧೬—೨—೪೬

[ "ಹರಿಜನ ಬಂಧು"ದಿಂದ ]

---

ಚತುಷ್ಪಾದ ಪ್ರಾಣಿಗಳ ರಕ್ಷಣೆಯ ತುದುಸಿನಲ್ಲಿ ೪೦ ಕೋಟಿ ದ್ವಿಪಾದ ಜೀವಿಗಳನ್ನು ಮರೆಯಬಾರದೆಂದೂ ಅವರಿಲ್ಲದಿದ್ದರೆ ಚತುಷ್ಪಾದಗಳು ಒಂದು ದಿನ ಸಹ ಬದುಕಲಾರವೆಂದೂ ಶ್ರೀಮತಿ ಅರುಣಾ ಅಸಫಅಲಿಯವರು ಆಡಿದ ವ್ಯಂಗೋಕ್ತಿಗಳನ್ನು ನೆನಪಿನಲ್ಲಿಟ್ಟುಕೊಳ್ಳಿರಿ—ಎಂದು ನಾನವರಿಗೆ ಕೊನೆಯದಾಗಿ ಹೇಳಿದೆನು. ಆದುದರಿಂದ ಪ್ರತಿಯೊಬ್ಬ ಪ್ರಾಮಾಣಿಕ ಮನುಷ್ಯನು ಜೀವಧಾರಣೆಗೆ ಅವಶ್ಯವಿದ್ದಷ್ಟನ್ನೇ ಸೇವಿಸಬೇಕಲ್ಲದೆ ಹೆಚ್ಚಾಗಿ ಒಂದು ತುತ್ತನ್ನು ಸಹ ಹಾಳು ಮಾಡಬಾರದು. ಪ್ರತಿಯೊಬ್ಬ ಸ್ತ್ರೀ-ಪುರುಷ ಮತ್ತು ತಿಳಿವಳಿಕೆ ಇದ್ದ ಮಗು ಒಂದು ದಂಟು ಬೆಳೆಯುವ ಸ್ಥಳದಲ್ಲಿ ಎರಡು ಬೆಳೆಯಲು ಯತ್ನಿಸಬೇಕು. ಹೀಗೆ ಬುದ್ಧಿಯಿಂದ ಪ್ರಾಮಾಣಿಕತೆಯಿಂದ ಮತ್ತು ಸಹಕಾರದಿಂದ ದುಡಿದರೆ ಮುಂಬರುವ ಭೀಕರ ಬರಗಾಲವನ್ನು ವಿಶೇಷ ತೊಂದರೆಯಿಲ್ಲದೆ ನಿವಾರಿಸಬಹುದು.

ಮುಂಬೈ                --ಮೋ. ಕ. ಗಾಂಧಿ
೧೮—೨—೪೬

# ದ್ವೇಷವನ್ನು ಹೇಗೆ ಪಳಗಿಸಬೇಕು

[ ಮೋ. ಕ. ಗಾಂಧಿ ]

ವಾತಾವರಣದಲ್ಲಿ ದ್ವೇಷ ಸಂಚಿತವಾಗಿದೆ. ಸಹನೆಯಿಲ್ಲದ ದೇಶಪ್ರೇಮಿಗಳು ಸಾಧ್ಯವಾದರೆ ಹಿಂಸೆಯ ಮೂಲಕ ಸ್ವಾತಂತ್ರ್ಯ ಧ್ಯೇಯವನ್ನು ಸಾಧಿಸಲು ಇದರ ಪ್ರಯೋಜನವನ್ನು ಸಂತೋಷದಿಂದ ಪಡೆಯಬಹುದು. ಇದು ಸರ್ವ ಕಾಲ ದೇಶಗಳಲ್ಲಿಯೂ ತಪ್ಪೆಂದು ನಾನು ಸೂಚಿಸಬಯಸುವೆ. ಆದರೆ ಯಾವ ದೇಶದಲ್ಲಿ ಸ್ವಾತಂತ್ರ್ಯದ ಯೋದ್ಧರು ತಮ್ಮ ಧೋರಣೆ ಸತ್ಯ-ಅಹಿಂಸಾಮಯವಾದುದೆಂದು ಜಗತ್ತಿಗೆ ಸಾರಿರುವರೊ ಆ ದೇಶದಲ್ಲಿಯಂತೂ ಇದು ಇನ್ನಷ್ಟು ತಪ್ಪು, ಇನ್ನಷ್ಟು ಅನುಚಿತ. ದ್ವೇಷವನ್ನು ಪ್ರೇಮವನ್ನಾಗಿ ಮಾರ್ಪಡಿಸುವದು ಸಾಧ್ಯವಲ್ಲವೆಂದು ಅವರ ಹೇಳಿಕೆ. ಹಿಂಸೆಯಲ್ಲಿ ವಿಶ್ವಾಸವುಳ್ಳವರು ಸ್ವಾಭಾವಿಕವಾಗಿ ದ್ವೇಷವನ್ನು ಉಪಯೋಗಿಸಿಕೊಂಡು, "ಸಾಧ್ಯವಾದಲ್ಲೆಲ್ಲ ಸುಳಿವು ನೋಡಿ ಗುಟ್ಟಾಗಿಯಾಗಲಿ, ಬಹಿರಂಗವಾಗಿಯಾಗಲಿ ನಿಮ್ಮ ಶತ್ರುವನ್ನು ಕೊಲ್ಲಿರಿ, ನೋಯಿಸಿರಿ, ಅವನ ಸೊತ್ತನ್ನು ನಷ್ಟಗೊಳಿಸಿರಿ" ಎಂದು ಹೇಳುವರು. ಪರಿಣಾಮವೆಂದರೆ ಇನ್ನೂ ಆಳವಾದ ದ್ವೇಷ, ಪ್ರತಿದ್ವೇಷ; ಎರಡೂ ಪಕ್ಷಗಳಿಂದ ಹಿಂಸೆ-ಪ್ರತಿಹಿಂಸೆಗಳ ಸೂರೆ. ದ್ವೇಷದ ಈ ಬಗೆಯಾದ ಉಪಯೋಗದ ನಿರರ್ಥಕತೆಯನ್ನು ಇದೇ ಈಗ ಮುಗಿದ, ಇನ್ನೂ ಕಿಡಿ ಆರದಿರುವ, ಯುದ್ಧವೇ ಗಟ್ಟಿಯಾಗಿ ಸಾರುತ್ತಿದೆ. ಈ ಯುದ್ಧದಲ್ಲಿ ವಿಜಯಿಗಳೆನಿಸಿಕೊಂಡವರು ನಿಜವಾಗಿ ಗೆದ್ದಿರುವರೋ, ಇಲ್ಲ, ತಮ್ಮ ವೈರಿಗಳನ್ನು ಅಧಃಪಾತಕ್ಕೆಳಿಸುವ ಹವಣಿನಲ್ಲಿ ತಾವೇ ಅಧಃಪತಿತರಾಗಿರುವರೋ ಇನ್ನೂ ನೋಡತಕ್ಕದ್ದಿದೆ. ಬಹಳಾದರೆ ಅವರಾಡಿದ್ದು ಪೇಚಿನ ಆಟ. ನಮ್ಮ ದೇಶದ "ಕ್ರಿಯಾ"ವಾದಿ ತಾರ್ಕಿಕರು ಈ ಮಾದರಿಯನ್ನೆ ಸುಧಾರಿಸಿ, "ನಾವು ನಮ್ಮ ಶತ್ರುವನ್ನು ಕೊಲ್ಲುವದೇ ಇಲ್ಲ. ಅವನ ಸೊತ್ತುಗಳನ್ನು ಮಾತ್ರ ನಾಶಗೊಳಿಸುವೆವು" ಎನ್ನುತ್ತಾರೆ. "ಅವನ ಸೊತ್ತು" ಎಂದು ಹೇಳಿ ನಾನು ಅವರಿಗೆ ಅನ್ಯಾಯ ಮಾಡುತ್ತಿದ್ದೇನೇನೊ. ಏಕೆಂದರೆ ಆ ಶತ್ರುವೆಂದು ಹೇಳಿಸಿಕೊಳ್ಳುವವನು, ವಿಚಿತ್ರವೆನಿಸುವಂತೆ, ತನ್ನೊಡನೆ ಯಾವ ಸ್ವಂತದ ಸೊತ್ತನ್ನೂ ತಂದಿರುವದಿಲ್ಲ. ಮತ್ತು ತಂದ ಅಲ್ಪಸ್ವಲ್ಪದರ ಬೆಲೆಯನ್ನೂ ನಮ್ಮಿಂದಲೇ ಕೊಡಿಸಿಕೊಂಡಿರುತ್ತಾನೆ. ಆದುದರಿಂದ ನಾವು ನಾಶಗೊಳಿಸುತ್ತಿರುವದು ನಿಜವಾಗಿ ನಮ್ಮದೇ ಸೊತ್ತು. ಅದರಲ್ಲಿ ಹೆಚ್ಚಿನದನ್ನು, ಮನುಷ್ಯರೂಪದಲ್ಲಿರಲಿ ವಸ್ತುರೂಪದಲ್ಲಿರಲಿ, ಅವನು ಇಲ್ಲಿಯೇ ಉತ್ಪಾದಿಸುತ್ತಾನೆ. ಆದುದರಿಂದ ನಿಜವಾಗಿ ಅವನಿಗಿರುವದು ಅದರ ಸ್ವಾಧೀನತೆ ಮಾತ್ರ. ನಾಶಗೊಳಿಸಿದ್ದಕ್ಕೂ ನಮ್ಮಿಂದಲೆ ದಂಡವನ್ನು ಕಕ್ಕಿಸಲಾಗುತ್ತದೆ ಮತ್ತು ಆ ದಂಡವನ್ನೂ ನಿರಪರಾಧಿಗಳೇ ತೆರಬೇಕಾಗುವದು. ಶುಂಡುಗಂಡಾಯಿ ಮತ್ತು ಅದರ ಬಳಗದ ದಂಡಗಳೆಲ್ಲ ಇದನ್ನೆ ವ್ಯಂಜಿಸುತ್ತವೆ. ಆದುದರಿಂದ, ಕೇವಲ ಕೊಲ್ಲದಿರುವದೆಂಬ ಅರ್ಥದ ಅಹಿಂಸೆ ಹಿಂಸಾತಂತ್ರಕ್ಕಿಂತ ಸುಧಾರಿಸಿದ್ದೆಂದು ನನಗನಿಸುವದಿಲ್ಲ. ಸಾವಧಾನವಾಗಿ ಚಿತ್ರಹಿಂಸೆ ಕೊಡುವದೆಂದೇ ಅದರ ಅರ್ಥವಾಗುತ್ತದೆ. ಆ ಸಾವಧಾನದ ಹಿಂಸೆ ಪರಿಣಾಮಕಾರಿಯಾಗದೆ ಹೋದರೆ ಒಡನೆ ನಾವು ಕೊಲ್ಲುವ ಕೆಲಸಕ್ಕೆ ಕೈಹಚ್ಚುವೆವು. ಮತ್ತು ಇಂದು ಹಿಂಸಾಶಾಸ್ತ್ರದ ಕೊನೆಯ ಅಧ್ಯಾಯವೆನಿಸಿರುವ ಪರಮಾಣು ಬಾಂಬನ್ನು ಉಪಯೋಗಿಸುವೆವು. ಆದುದರಿಂದ ೧೯೨೦ ರಲ್ಲಿ ನಾನು ದ್ವೇಷವನ್ನು ಯೋಗ್ಯ ಮಾರ್ಗದಲ್ಲಿ ಪಳಗಿಸಲು ಅಹಿಂಸೆಯನ್ನೂ ಅದರ ಬೆಸುಗೆಬಿಡದ ಜತೆಗಾರ ಸತ್ಯವನ್ನೂ ಬೋಧಿಸಿದೆನು. ಹಗೆಗಾರನು ಕೇವಲ ಹಗೆಗಾಗಿಯೇ ದ್ವೇಷಿಸುತ್ತಿರುವದಲ್ಲ. ತನ್ನ ದೇಶದಿಂದ ತನ್ನ ಹಗೆಯಾದ ಪ್ರಾಣಿಯನ್ನೊ ಪ್ರಾಣಿಗಳನ್ನೊ ಓಡಿಸಬೇಕೆಂಬ ಬಯಕೆ ಅವನಿಗೆ. ಆದುದರಿಂದ ತನ್ನ ಧ್ಯೇಯ ಸಿದ್ಧಿಸುವದಾದರೆ ಹಿಂಸಾಸಾಧನದಷ್ಟೇ ಸಂತೋಷದಿಂದ ಅಹಿಂಸಾಸಾಧನವನ್ನೂ ಉಪಯೋಗಿಸಲು ಅವನು ಒಪ್ಪುವನು. ಕಳೆದ ೨೫ ವರ್ಷಗಳಿಂದ, ಬಯಸಿಯೋ ಬಯಸದೆಯೋ, ಕಾಂಗ್ರೆಸ್ಸು ಜನತೆಯೊಡನೆ ಮಾತಾಡುವಾಗ ನಮ್ಮ ಕಳೆದು ಹೋದ ಸ್ವಾತಂತ್ರ್ಯವನ್ನು ಗಳಿಸಲು ಹಿಂಸೆಯ ವಿರುದ್ಧ ಅಹಿಂಸೆಯನ್ನೇ ಪ್ರತಿಪಾದಿಸಿದೆ. ನಮ್ಮ ಮುನ್ನಡೆಯಾದಂತೆ, ಅಹಿಂಸಾತಂತ್ರವನ್ನು ಬಳಸಿದ್ದರಿಂದ ಜನತೆಯ ಬುದ್ಧಿಯ ಮೇಲೆ ನಾವು ಹಿಂದೆಂದಿಗಿಂತ ಶೀಘ್ರವಾಗಿಯೂ ಹೆಚ್ಚು ವಿಸ್ತಾರವಾಗಿಯೂ ಪ್ರಭಾವಬೀರಬಲ್ಲವರಾದೆವೆಂದು ನಮ್ಮ ಅನುಭವಕ್ಕೆ ಬಂತು. ಆದರೆ ಸತ್ಯವನ್ನು ಇದ್ದಕ್ಕಿದ್ದಂತೆ ಹೇಳಬೇಕಾದರೆ ನಮ್ಮ ಅಹಿಂಸಾಕ್ರಿಯೆ ಅರೆಮನಸ್ಸಿನದಾಗಿಯೆ ಇತ್ತು. ಅನೇಕರು ಒಡಲಲ್ಲಿ ಹಿಂಸೆಯನ್ನು ಬಚ್ಚಿಟ್ಟು ಬಾಯಲ್ಲಿ ಅಹಿಂಸೆಯನ್ನು ಉಪದೇಶಿಸಿದ್ದಾರೆ. ಆದರೆ ಜನತೆಯ ಸರಳಬುದ್ಧಿ ನಮ್ಮ ಹೃದಯಗಳಲ್ಲಿ ಹುದುಗಿರುವ ಅರ್ಥಗಳನ್ನು ಓದಿದೆ. ಆದುದರಿಂದ ಜನತೆ ಅಂತಃಪ್ರೇರಣೆಯಿಂದ ಯಾವಬಗೆಯ ಪ್ರತಿಕ್ರಿಯೆ ತೋರಬೇಕಾಗಿತ್ತೊ ಆ ಬಗೆಯದನ್ನು ತೋರಲಿಲ್ಲ. ನಿಜವಾದ ಸದ್ಗುಣದ ಸ್ತುತಿಯ ರೂಪಧರಿಸಿ ವಂಚನೆ ಮೆರೆಯಬಲ್ಲದೇ ಹೊರತು ಸದ್ಗುಣದ ಪೀಠದಲ್ಲಿ ಅದು ಕೂಡಲಾರದು. ಆದುದರಿಂದ ಅಹಿಂಸೆಗಾಗಿ, ಇನ್ನಷ್ಟು ಅಹಿಂಸೆಗಾಗಿ ನನ್ನ ಪ್ರಾರ್ಥನೆಯಿದೆ. ನಾನು ಅರಿವಿಲ್ಲದೆ ಹೀಗೆ ಹೇಳುವದಿಲ್ಲ, ನನ್ನ ಬೆನ್ನ ಹಿಂದೆ ೬೦ ವರ್ಷಗಳ ಅನುಭವದ ಸಂದಣಿಯುಂಟು. ಇದೊಂದು ಇಕ್ಕಟ್ಟಿನ ಮುಹೂರ್ತ; ಬಾಯಿಲ್ಲದ ಜನತೆ ಇಂದು ಉಪವಾಸ ಸಾಯುತ್ತಿದೆ. ದೇಶದ ಸದ್ಯದ ಬೇಕುಗಳಿಗೆ ಅಹಿಂಸೆಯ ತತ್ವಗಳನ್ನು ಹೇಗೆ ಬಳಸಿಕೊಳ್ಳಬೇಕೆಂದು ಜಾಣರಾದ ವಾಚಕರಿಗೆ ಹಲಬಗೆಯ ವಿಧಾನಗಳು ಹೊಳೆಯಬಹುದು. ಆಝಾದ ಸೇನೆಯ ಸಮ್ಮೋಹನಾಸ್ತ್ರ ನಮ್ಮನ್ನು ಮುಂಕುಬಡಿಸಿಬಿಟ್ಟಿದೆ. ನೇತಾಜಿಯ ಹೆಸರು ಮಂತ್ರವಾಕ್ಯವಾಗಿದೆ. ಅವರ ದೇಶಪ್ರೇಮ ಅದ್ವಿತೀಯವಾಗಿದೆ. ( ನಾನು ಬೇಕೆಂದೆ ವರ್ತಮಾನ ಕಾಲವನ್ನು ಬಳಸುತಿದ್ದೇನೆ ) ಅವರ ಶೌರ್ಯ ಅವರ ಎಲ್ಲ ಕಾರ್ಯಗಳಲ್ಲಿಯೂ ಮಿಂಚುತ್ತಿದೆ. ಅವರ ಗುರಿ ಉನ್ನತವಾಗಿತ್ತು. ಆದರೆ ಅವರು ವಿಫಲರಾದರು. ಅಸಾಫಲ್ಯ ಯಾರಿಗೆ ಒದಗಿಲ್ಲ? ನಮ್ಮ ಗುರಿ ಉನ್ನತವಾಗಿರಬೇಕು, ಗುರಿ ಸರಿಯಾಗಿ ಹಿಡಿದಿರಬೇಕು. ಯಶಸ್ಸು ದೈವಾಯತ್ತವಾದುದು. ನನ್ನ ಸ್ತುತಿ, ನನ್ನ ಅಭಿನಂದನೆ ಇದಕ್ಕಿಂತ ಮುಂದೆ ಹೋಗಲರಿಯದು. ಏಕೆಂದರೆ ಅವರ ಕ್ರಿಯೆಯ ವಿಫಲತೆ ಕಟ್ಟಿಟ್ಟದ್ದೇ ಆಗಿತ್ತು. ಅವರು ತಮ್ಮ ಆಝಾದ ಸೇನೆಯನ್ನು ವಿಜಯಿಯಾಗಿ ಹಿಂದುಸ್ತಾನಕ್ಕೆ ತಂದಿದ್ದರೂ ನಾನು ಹೀಗೆಯೆ ಹೇಳುತಿದ್ದೆ. ಆ ಮಾರ್ಗದಿಂದ ಈ ದೇಶದ ಜನತೆ ತಾನು ಕಳೆದುಕೊಂಡದನ್ನು ಮರಳಿಗಳಿಸುವದು ಸಾಧ್ಯವಿದ್ದಿಲ್ಲ. ನೇತಾಜಿಯೂ ಅವರ ಸೇನೆಯೂ ನಮಗೆ ಬೋಧಿಸುವ ಪಾಠವೆಂದರೆ ಬಲಿದಾನ ವರ್ಗ, ಜಾತಿ, ಮತಭೇದವಿಲ್ಲದ ಒಗ್ಗಟ್ಟು ಮತ್ತು ಶಿಸ್ತು. ನಮ್ಮ ಪೂಜಾಬುದ್ಧಿ ಜಾಣತನದ್ದಾಗಿದ್ದರೆ, ವಿವೇಕಶಾಲಿಯಾಗಿದ್ದರೆ ನಾವು ಈ ಗುಣತ್ರಯವನ್ನು ಅನುಸರಿಸಬೇಕು. ಆದರೆ ಹಿಂಸೆಯನ್ನು ಸರ್ವಥಾ ನಿರಾಕರಿಸಬೇಕು. ಆಝಾದ ಹಿಂದ ಸೇನೆಯ ಸೈನಿಕನು ತಾನು ತನ್ನ ದಾಗಲಿ ಹಿಂದುಸ್ತಾನವನ್ನು ಶೃಂಖಲೆಗಳಿಂದ ಬಿಡಿಸಲು ಬಲ ಪ್ರಯೋಗ ಮಾಡಿ ಸಫಲನಾಗಬಲ್ಲೆನೆಂದು ಭಾವಿಸಿದರೆ, ಹೇಳಿದರೆ ಅದನ್ನು ನಾನು ಒಪ್ಪಲಾರೆ. ಆದರೆ ಅವನು ನೇತಾಜಿಗೆ ವಿಧೇಯನಾಗಿದ್ದರೆ, ಮತ್ತು ಈ ದೇಶದ ಹಿತಕ್ಕೆ ಅದಕ್ಕಿಂತಲೂ ವಿಧೇಯನಾಗಿದ್ದರೆ, ಅವನು ಜನತೆಗೆ ಗಂಡಸರಿಗೆ, ಹೆಂಗಸರಿಗೆ, ಮತ್ತು ಮಕ್ಕಳಿಗೆ, ಶೌರ್ಯವನ್ನೂ ಆತ್ಮಬಲಿದಾನವನ್ನೂ ಐಕ್ಯವನ್ನೂ ಬೋಧಿಸುವದರಲ್ಲಿ ಜನ್ಮ ಸವೆಸಬೇಕು. ಆಗ ನಾವು ಜಗತ್ತಿನ ಮುಂದೆ ತಲೆಯೆತ್ತಿ ನಿಲ್ಲಬಲ್ಲೆವು. ಆದರೆ ಅವನು ಸಶಸ್ತ್ರ ಸೈನಿಕನಂತೆಯೆ ವರ್ತಿಸುವನಾದರೆ ಅವನು ಜನತೆಯ ಮೇಲೆ ಸವಾರಿ ಮಾಡಿದಂತೆ ಮಾತ್ರ ಆದೀತು. ಅವನು ಸ್ವಯಂಸೇವಕನಾಗುವನೆಂಬ ಮಾತಿನಲ್ಲಿ ಬಹಳ ಮಹತ್ವ ಉಳಿಯದು. ಆದುದರಿಂದ ನೇತಾಜಿಯ ಸುಶಿಷ್ಯನೆನಿಸಲು ಈ ದೇಶಕ್ಕೆ ಬಂದ ನಂತರ ತಾನು ಕಾಂಗ್ರೆಸ ಸೇನೆಯಲ್ಲಿ ಅಹಿಂಸಾ ಸೈನಿಕನಾಗಿರುವೆನೆಂದು ಶ್ರೀ ಶಾನವಾಜರು ಸಾರಿದ್ದನ್ನು ನಾನು ಸ್ವಾಗತಿಸುತ್ತೇನೆ.

# ಹರಿಜನ ಹೊರಬಿದ್ದ ಕಥೆ

"ಹರಿಜನ" ವಾರ ಪತ್ರಿಕೆಗಳಿಗೆ ಲೇಖನಗಳನ್ನು ಕಳಿಸುವದು ಗಾಂಧೀಜಿ ಸಂಚಾರದಲ್ಲಿರುವ ಕಾಲದಲ್ಲಿ, ಯಾವಾಗಲೂ ಒಳ್ಳೆ ಉತ್ತೇಜನಕ್ಕೆ ಅವಕಾಶ ಕೊಡುವ ಸಂಗತಿಯೆ ಆಗಿರುತಿತ್ತು. ರೇಲ್ವೆ ನಕಾಶೆಗಳನ್ನು ಇಣುಕಿಕ್ಕುವದು, ತಂತಿ ಟಪಾಲು ಕೈಪಿಡಿಗಳ ಅನಂತ ಪುಟಗಳ ಮೇಲೆ ಕಣ್ಣಾಡಿಸುವದು, ಗಾಡಿ ಸಮಯಗಳನ್ನೂ ಗಾಡಿ ಸಂಧಿಗಳನ್ನೂ ಪರಿಶೋಧಿಸುವದು, ಸಾಲದ್ದಕ್ಕೆ ತಡ ಮಾಡಬರುವ ಉಚ್ಛೃಂಖಲ ಸ್ವಭಾವದ ಗಾಡಿಗಳ ಹೊತ್ತು ಗೊತ್ತು ಮಾಡಿಕೊಳ್ಳುವದೇ ಮೊದಲಾದ ಕೆಲಸಗಳು ಅದರಲ್ಲಿ ಸೇರಿರುತಿದ್ದವು. ಇದು ಹಿಂದೀ ಟಪಾಲ ಪದ್ಧತಿಯಲ್ಲಿ ಅನೇಕ ಗಾಂಧೀ ಶಿಷ್ಯರನ್ನು ನಿಷ್ಣಾತರಾಗಿ ಮಾಡಿಬಿಟ್ಟಿದೆ. ಉದಾಹರಣೆಗಾಗಿ, ಯಾವುದಾದರೊಂದು ನಿರ್ದಿಷ್ಟ ಸ್ಥಳಕ್ಕೆ ಟಪಾಲು ಸೇರಲು ಎಷ್ಟು ಹೊತ್ತು ಬೇಕಾಗುವದೆಂದು ಗಾಂಧೀಜಿ ನಿರ್ಧಾರವಾಗಿ ಹೇಳಬಲ್ಲವರಾಗಿದ್ದರು. ಗಾಂಧಿ—ಆಯರ್ವಿನ್ ಮಾತುಕತೆಗಳ ಕಾಲದಲ್ಲಿ ಆಯರ್ವಿನ್ನರು ಗಾಂಧೀಜಿಯನ್ನುದ್ದೇಶಿಸಿ ಬರೆದಿದ್ದ ಒಂದು ಪತ್ರ ಸಕಾಲದಲ್ಲಿ ಕಳಿಸಲ್ಪಟ್ಟಿತ್ತೇನೆಂಬ ಪ್ರಶ್ನೆ ಉದ್ಭೂತವಾಯಿತೊಮ್ಮೆ. ಲಾರ್ಡ ಆಯರ್ವಿನ್ನರು ಅದು ಕಳಿಸಲ್ಪಟ್ಟಿರಬೇಕೆಂದು ಸಾಧಿಸಿದರು. "ಹಾಗಾದರೆ ಅದು ನಾನು ಬಾರ್ಡೋಲಿಯಿಂದ ಹೊರಡುವ ಮೊದಲೇ ನನಗೆ ತಲುಪಬೇಕಾಗಿತ್ತು" ಎಂದರು ಗಾಂಧೀಜಿ "ನಿಮ್ಮ ಕಚೇರಿಯಲ್ಲಿ ಸ್ವಲ್ಪ ವಿಚಾರ ಮಾಡಿ ನೋಡಿರಂತೆ. ಕಳಿಸುವದರಲ್ಲಿ ಏನೋ ತಡವಾಗಿರಲೇ ಬೇಕು." ಕೊನೆಗೆ ಗಾಂಧೀಜಿ ಅಂದದ್ದೆ ಸರಿಯೆಂದು ಸಿದ್ಧವಾಯಿತು.

ಆದರೆ ಈ ಬಾರಿ ಮಾತ್ರ ಮದ್ರಾಸದಿಂದ ವರ್ಧಾಕ್ಕೆ ನಮ್ಮನ್ನು ಕರೆತಂದ "ವಿಶೇಷ" ಗಾಡಿಯ ತಲೆ ತಿರುಕತನದ ಮುಂದೆ ಅವರ ನಿಶ್ಚಿತ ಜ್ಞಾನವೇನೂ ಫಲಕಾರಿಯಾಗಲಿಲ್ಲ. ಕೇಂದ್ರ ಶಾಸನ ಸಭೆಯಲ್ಲಿ ಮದ್ರಾಸಿನ ಯುರೋಪಿನ್ ಸದಸ್ಯರೊಬ್ಬರೆಂದು ತೋರುತ್ತದೆ. ಗ್ರಾಂಡ ಟ್ರಂಕ ಎಕ್ಸಪ್ರೆಸ್ ಗಾಡಿಯ ಓಟ ಸ್ಥಿರತೆಗಳನ್ನು ಹೆಂಡ ಕುಡಿದ ಶಿವನ ಕುದುರೆಯ ಚರಮ ಉನ್ಮತ್ತಾವಸ್ಥೆಗೆ ಹೋಲಿಸಿದ್ದರು. ಇರಲಿ, ಗಾಂಧೀಜಿಯ "ವಿಶೇಷ" ಗಾಡಿ ಮಿ. ಎಫ್. ಇ. ಜೇಮ್ಸರ ಗ್ರ್ಯಾಂಡ ಟ್ರಂಕ ಎಕ್ಸಪ್ರೆಸ ಗಾಡಿಯನ್ನೂ ಹಿಂದೆ ಹಾಕುವಂತಿತ್ತು. ಅದು ಸಂಜೆ ೫ ಗಂಟೆಗೆ ವರ್ಧಾ ಮುಟ್ಟಬೇಕಾಗಿತ್ತು, ಮುಂಬಯಿ ಮೇಲ ಗಾಡಿ ವರ್ಧಾದಿಂದ ಸಂಜೆ ೬-೧೦ಕ್ಕೆ ಹೊರಟಿತು. ಮದ್ರಾಸದಿಂದ ಮದುರೆಗೂ ಪಳಣಿಗೂ ಮತ್ತು ತಿರುಗಿ ಮದ್ರಾಸಿಗೂ ಮಾಡಿದ ಪ್ರಯಾಣ ಗಾಂಧೀಜಿಗೆ ಅಶಾಂತಿಯ ಮುದ್ದೆಯೇ ಆಗಿತ್ತು. ಆದುದರಿಂದ ಅವರು ತಮ್ಮ ಬರಹಗಳ ಹೆಚ್ಚಿನ ಅಂಶವನ್ನು ವರ್ಧಾ ಪ್ರಯಾಣದ ಕಾಲದಲ್ಲಿಯೇ ಬರೆದರು. ಲೇಖನಗಳ ಕೆಲ ಭಾಗವನ್ನಾದರೂ ವರ್ಧಾಕ್ಕೆ ಟಪಾಲಿನಲ್ಲಿ ಹಾಕುವ ಲೆಕ್ಕ ಹಿಡಿದು ನಾವು ಸಾಗಿದ್ದೆವು. ಒಮ್ಮಿಂದೊಮ್ಮೆ ೫ ನೇ ತಾರೀಖಿನ ಮುಂಜಾನೆ ಗಾಂಧೀಜಿ ನನ್ನನ್ನು ಕರೆದರು. "ನಾವು ಸಮಯಕ್ಕೆ ಸರಿಯಾಗಿ ಸಾಗುತ್ತಿದ್ದೇವೆಯೆ?" ಕೇಳಿದರವರು. "ಬೆಜವಾಡದಲ್ಲಿ ಅನಾವಶ್ಯಕವಾಗಿ ೪೦ ನಿಮಿಷ ತಡವಾಗಿಬಿಟ್ಟಿತು. ಕಾಝಿಪೇಟೆಯಲ್ಲಿ ಮತ್ತಷ್ಟು ಕಾಲಹರಣವಾಯಿತು."

"ಅದು ನಿಜ," ನಾನೆಂದೆ. "ನಾವು ಈಗಾಗಲೇ ಲೆಕ್ಕಕಿಂತ ಎರಡು ತಾಸು ಹಿಂದೆ ಬಿದ್ದಿದ್ದೇವೆ. ನೀವು ಹೇಳಿದ ನಿಲ್ದಾಣಗಳಲ್ಲಿ ತುಂಬಿದ ಜನ ಸಂದಣಿಯನ್ನು ತೆರವು ಮಾಡುವದಕ್ಕೆ ಅಷ್ಟು ತಡವಾಯಿತಂತೆ."

"ಗಾಡಿ ನಿಲ್ಲುವ ಸ್ಥಳಗಳ ಒಂದು ಯಾದಿಯನ್ನು ಈಗಲೆ ನನಗೆ ಕೊಡು" ಅವರು ಕೇಳಿದರು. "ಅವುಗಳಲ್ಲಿ ಕೆಲವು ತಾಣಗಳಲ್ಲಿ ತಡೆಯುವದನ್ನು ನಿಲ್ಲಿಸಿ ಕಳೆದುಕೊಂಡ ಸಮಯವನ್ನು ತುಂಬಿಕೊಳ್ಳಲಾಗುವುದೇನೆಂದು ನೋಡೋಣ." ನಾನು ಗಾರ್ಡನ ಬಳಿಗೋಡಿ ಪರಿಸ್ಥಿತಿಯನ್ನು ವಿವರಿಸಿದೆ.

ಊಹೂಂ" ಎಂದವನು. "ಇನ್ನು ಮುಂದೆ ಎರಡೇ ನಿಲ್ದಾಣಗಳಲ್ಲಿ ತಡೆಯುವದಿದೆ. ಒಂದು ಗಾಡಿ ತಿರುವುವ ನಿಲ್ದಾಣ · ಇನ್ನೊಂದು ನೀರು ತುಂಬುವದು."

"ಹಾಗಾದರೆ ಬಾಯ್ಲರುಗಳು ಒಡೆಯುವವರೆಗೂ ವೇಗ ಹೆಚ್ಚಿಸಿರಪ್ಪಾ" ಎಂದು ವಿಷಾದಪೂರ್ವಕ ಗಹಗಹಿಸುತ್ತ ನಾನೆಂದೆ.

"ನಿಝಾಮರ ರಾಜ್ಯದ ಮಾರ್ಗನಿಯಂತ್ರಕರ ಕಾಲದಲ್ಲಿ ಅದೂ ಸಾಧ್ಯವಿಲ್ಲ" ಎಂದನಾತ.

ಆದರೂ ಕೆಲ ನಿಮಿಷಗಳ ನಂತರ ಗಾಂಧೀಜಿಗೆ ವರದಿ ಮಾಡಲು ಬಂದಾಗ ಅವನು ಗಾಡಿಯನ್ನು ಸಕಾಲದಲ್ಲಿ ವರ್ಧಾಕ್ಕೆ ಮುಟ್ಟಿಸಲು "ಪ್ರಯತ್ನಿಸು"ವದಾಗಿ ಭರವಸೆ ಕೊಟ್ಟ. ಆದರೆ ಅವನ ಈ ವಾಗ್ದಾನವನ್ನು ವಿನೋದಬುದ್ಧಿಯಿಂದಲೇ ನೋಡಬೇಕಾಗಿತ್ತು. ಇನ್ನೂ ೨೫೮ ಮೈಲು ದಾರಿ ಉಳಿದಿತ್ತು. ಅದನ್ನು ಅಂತರಿಸಲು ಎಲ್ಲಿಯೂ ನಿಲ್ಲದೆ ತಾಸಿಗೆ ನಾಲ್ವತ್ತು ಮೈಲಿನಂತೆ ಓಡಿಸಿದರೂ ೬ ತಾಸು ಹಿಡಿಯುವದು. ಅಷ್ಟರಲ್ಲಿ ರಾತ್ರಿ ಎಂಟುಗಂಟೆಯಾಗಿ ಬಿಡುವದು, ಆದುದರಿಂದ ಪ್ರಯತ್ನ ಮಾಡುವ ಆಶೆ ಬಿಟ್ಟು ಕುಳಿತೆವು. ಗಾಡಿಯ ಸಿಬ್ಬಂದಿಯೂ ನಮ್ಮನ್ನೇ ಅನುಕರಿಸಿದಂತೆ ತೋರುತ್ತದೆ. ಆ ಬಾಯಾರಿದ ಇಂಜಿನಿಗೆ ನೀರು ಕುಡಿಸುವದೋ ಸಾಮಾನ್ಯ ಮನುಷ್ಯನ ಬುದ್ಧಿಗೆ ನಿಲುಕಲಾರದಷ್ಟು ದುರ್ಜ್ಞೇಯವಾದ ಇತರ ಕ್ರಮಗಳೋ ಎಲ್ಲ ಸೇರಿ ವರ್ಧಾಕ್ಕೆ ಗಾಡಿ ಬಂದು ಸೇರುವಾಗ ರಾತ್ರಿ ೧೧-೪೫ ಆಗಿಬಿಟ್ಟಿತು.

ಮಾಡಬೇಕೇನು? ಮುಂಬಯಿಯಿಂದ ವಿಮಾನ ಮೂಲಕ ಲೇಖನಗಳನ್ನು ಕಳಿಸೋಣವೆ? ಆದರೆ ಮುಂಬಯಿ ಮೇಲು ಬಂದು ತಲಪುವ ಮೊದಲೇ ಈಗಿನ ವಿಮಾನ ಹೊರಟುಬಿಟ್ಟಿರುತ್ತದೆ. "ಎಲ್ಲ ಲೇಖನಗಳ ಪ್ರತಿಗಳನ್ನು ಮುಂಬಯಿಗೆ ಕಳಿಸಿ ಹರಿಜನ ವಾರಪತ್ರಿಕೆಗಳ ಮೊದಲ ಸಂಚಿಕೆಯನ್ನು ಮುಂಬಯಿಯಲ್ಲಿ ಮುದ್ರಿಸಿಕೊಳ್ಳೋಣ" ಎಂದು ಗಾಂಧೀಜಿ ಸೂಚಿಸಿದರು. "ಫಿನಿಕ್ಸದಲ್ಲಿದ್ದಾಗ 'ಇಂಡಿಯನ್ ಒಪೀನಿಯನ್' ಪತ್ರಿಕೆಗೆ ಒಮ್ಮೆ ಹೀಗೆಯೇ ಮಾಡಿದ್ದೆ."

"ಆದರೆ ಪತ್ರಿಕೆಗಳನ್ನು ಕಳಿಸುವ ಏರ್ಪಾಡೇನು? ವರ್ಗಣಿದಾರರ ಯಾದಿ ನಮ್ಮ ಕೈಯ್ಯಲ್ಲಿಲ್ಲ." ಅಂತೂ ಅವಸ್ಥೆ ಹೀಗಾಯಿತು.

"ಹಿಂದುಸ್ತಾನಿ ಗುಜರಾತಿ ಸಹಿತ ಎಲ್ಲ ಲೇಖನಗಳನ್ನು ತಂತಿಯಿಂದ ಕಳಿಸಲು ನೋಡೋಣ" ಎಂದೆ ನಾನು.

"ಹಾಗಾದರೆ ಹಿಂದುಸ್ತಾನಿ ಮತ್ತು ಗುಜರಾತಿ ಲೇಖನಗಳನ್ನು ರೋಮನ್ ಲಿಪಿಗೆ ಪರಿವರ್ತಿಸು."

ಈ ತಲೆ ಬೇಸರದ ಕೆಲಸದಲ್ಲಿ ನಾನು ಮಧ್ಯಾಹ್ನದವರೆಗೆ ಒದ್ದಾಡಿದೆ (ಎಲ್ಲ ವಾರ್ತಾ ಸಂಸ್ಥೆಗಳೂ ರಾಷ್ಟ್ರ ಭಾಷೆಯಲ್ಲಿ ವಾರ್ತೆಗಳನ್ನು ಕಳಿಸುವ ದಿನ ಎಂದು ಬರುವದೊ!) ಇಷ್ಟರಲ್ಲಿ ಕನೂ ಗಾಂಧಿಗೆ ಒಂದು ಸ್ಫೂರ್ತಿ ಬಂತು. "ಇಂಗ್ಲಿಷ ಲೇಖನಗಳನ್ನು ಮೊದಲು ತಂತಿಯಿಂದ ಕಳಿಸಿರಿ. ಉಳಿದುದನ್ನು ವಿಶೇಷ ದೂತನ ಜತೆ ಕಳಿಸೋಣ. ಅವನು ಅಲ್ಲಿ ಒಂದು ದಿನ ತಡವಾಗಿ ಮುಟ್ಟುವನು. ಆದರೆ 'ಹರಿಜನ' (ಇಂಗ್ಲಿಷ)ದ ಕೆಲಸ ಮೊದಲೆ ಆರಂಭವಾದರೆ ಮುದ್ರಣಾಲಯದವರು ಉಳಿದ ಕೆಲಸವನ್ನು ಹೇಗಾದರೂ ಮುಗಿಸಬಲ್ಲರು." ಅಂತೆಯೇ ವಿಶೇಷ ದೂತನನ್ನು ಅಟ್ಟುವದಾಯಿತು. ಹೀಗೆ ಕೊನೆಗೆ ಇಷ್ಟೆಲ್ಲ ತಂಟೆಯ ನಂತರ ಮೂರೂ ಹರಿಜನ ಪತ್ರಿಕಗಳ ಮೊದಲ ಸಂಚಿಕೆ ಮತ್ತೊಮ್ಮೆ ಸಕಾಲದಲ್ಲಿಯೆ ಹೊರಟವು.

ಸೇವಾಗ್ರಾಮ — ಪ್ಯಾರೇಲಾಲ

೯—೨—೪೬.

* * *

ಕಾಠೇವಾಡ ಹಳ್ಳಿಗಳಲ್ಲಿ ಕಾಲರಾ ರೋಗ ಪ್ರಾರಂಭವಾದರೆ, ಅದರ ಹೊಣೆಯನ್ನು ಹರಿಜನ ಕಸಗೂಡಿಸುವವರ ಮೇಲೆ ಹೊರಿಸಿ ಮಂತ್ರಶಕ್ತಿಯಿಂದ ರೋಗ ತಂದಿರುವರೆಂದು ಆರೋಪಿಸುತ್ತಾರೆ ಮತ್ತು ಪೀಡಿಸುತ್ತಾರೆ. ಕೆಲ ವೇಳೆ ರೋಗ ನಿಲ್ಲುವವರೆಗೆ ಅವರನ್ನು ಊರು ಬಿಡಿಸುತ್ತಾರೆ.

ಈ ಕ್ರೌರ್ಯದ ಜೊತೆಗೆ ಸಂತೋಷದ ಸಂತೋಷದ ಸುದ್ದಿಯೂ ಇದೆ. ಅದೆಂದರೆ, ಮೊನ್ನಿನ ಗಾಂಧಿ ಜಯಂತಿ ದಿನ ಹರಿಜನರು ಮತ್ತು ಹರಿಜನೇತರರು ಸಹಭೋಜನ ಮಾಡಿದರು.

# ಕರ್ನಾಟಕ

## ಧಾರವಾಡ

ಕಲಕತ್ತೆಯ ಗೋಳೀಬಾರಿನ ನಿಷೇಧಾರ್ಥವಾಗಿ ತಾ. ೧೬ ನೇ ದಿನ ರೋಣದಲ್ಲಿ ರಾಷ್ಟ್ರಸೇವಾದಳದವರೂ ವಿದ್ಯಾರ್ಥಿಗಳೂ ಮೆರವಣಿಗೆ ಹೊರಡಿಸಿ ಸಂಜೆಗೆ ಸಭೆ ಸೇರಿಸಿ ಸರಕಾರದ ಧೋರಣ ಖಂಡಿಸಿದರು.

ಹರ್ಲಾಪೂರ ಗ್ರೂಪ ಶಿಕ್ಷಕರ ಸಮ್ಮೇಲನವು ಡಿ. ಎ. ಇನಸ್ಪೆಕ್ಟರರ ಅಧ್ಯಕ್ಷತೆಯಲ್ಲಿ ಸಾಂಗವಾಗಿ ನಾದರಿ ಪಾಠ, ವಿದ್ಯಾರ್ಥಿಗಳ ಶಾರೀರಕ ಚಟುವಟಿಕೆ, ಅಭಿನಯ ಮೊದಲಾದ ಕಾರ್ಯಕ್ರಮಗಳಾದವು.

ಮೆಡ್ಲೇರಿ ಭಾಗದ ಗ್ರೂಪ ಪಂದ್ಯಾಟಗಳು ಶ್ರೀ ಎಸ್. ಕೆ. ಬಣಗಾರರ ಅಧ್ಯಕ್ಷತೆಯಲ್ಲಿ ಜರುಗಿ ಮೇಲಿನ ಪ್ರಾಥಮಿಕ ಶಾಲೆಗಳಲ್ಲಿ ಆರೇಮಲ್ಲಾಪುರ ಶಾಲೆ, ಕೆಳಗಿನ ಪ್ರಾಥಮಿಕ ಶಾಲೆಗಳಲ್ಲಿ ನದೀ ಹರಳಹಳ್ಳಿ ಶಾಲೆ, ಗಾವಠಿ ಶಾಲೆಗಳಲ್ಲಿ ಮೈದೂರ ಶಾಲೆ ಪರಾಕ್ರಮಿ ಶಾಲೆಗಳೆಂದು ನಿರ್ಣಯಿಸಲ್ಪಟ್ಟವು.

ಶ್ರೀ ಕಳ್ಳಿ ತಿಪ್ಪಣ್ಣ ಶಾಸ್ತ್ರಿಗಳು ಕಾಂಗ್ರೆಸ ಚುನಾವಣೆ ಪ್ರಚಾರಕ್ಕಾಗಿ ತಾ. ೨೩ ರಿಂದ ೨೫ ಪೂರ್ಣ ರೋಣ ತಾಲೂಕಿನಲ್ಲಿಯೂ ತಾ. ೨೬ ರಿಂದ ೨೮ ಪೂರ್ಣ ನವಲಗುಂದ ತಾಲೂಕಿನಲ್ಲಿಯೂ ಸಂಚರಿಸುವರು.

ಧಾರವಾಡ ಜಿಲ್ಹಾ ಕಾಂಗ್ರೆಸ ಕಮಿಟಿಯವರು ಕಾಂಗ್ರೆಸ ಹುರಿಯಾಳುಗಳು ಸುಗಮವಾಗಿ ಆರಿಸಿ ಬರುವಂತೆ ಮತಗಳ ಹಂಚುವಿಕೆಯನ್ನು ಕೆಳಗಿನಂತೆ ಗೊತ್ತುಪಡಿಸಿದ್ದಾರೆ. ಆ ಸ್ಥಳದ ಮತದಾರರು ಅದರಂತೆಯೆ ಮತ ಹಾಕಬೇಕು.

ಗದಗ, ನವಲಗುಂದ, ರೋಣ ತಾಲೂಕ, ಮುಂಡರಗಿ ಹಾಗು ನರಗುಂದ ಪೇಠಾ ಹಾಗೂ ಬ್ಯಾಹಟ್ಟಿ, ಸುಳ್ಳ, ಕಿರೇಸೂರ, ಹೆಬಸೂರ, ಕೋಳಿವಾಡ, ಮಲ್ಲಿಗವಾಡ, ಕೊಂಕಣ ಕುರಹಟ್ಟಿ ರೊಟ್ಟಿಗವಾಡ, ಉಮಚಗಿ, ಹೆಬ್ಬಳ್ಳಿ ಈ ಹಳ್ಳಿಗಳ ಮತದಾರರು ಅಂದಾನೆಪ್ಪ ಹಾಗು ನೇಶ್ವಿ ಅವರಿಗೆ ಎರಡೆರಡು ಮತ ಹಾಕಬೇಕು.

ಧಾರವಾಡ, ಹುಬ್ಬಳ್ಳಿ ಹಾಗು ಕಲಘಟಗಿ ತಾಲೂಕದವರು (ಮೇಲಿನ ಪ್ಯಾರಾದಲ್ಲಿಯ ಹಳ್ಳಿಗಳನ್ನು ಬಿಟ್ಟು) ಶ್ರೀ ಹುಕ್ಕೇರಿಕರ ಹಾಗು ಶ್ರೀ ಹುಂದೂರರಿಗೆ ಎರಡೆರಡು ಮತ ಕೊಡಬೇಕು.

ದಕ್ಷಿಣ ಭಾಗದಲ್ಲಿಯ ಮತದಾರರು ಶ್ರೀ ಕೆ ಎಫ್ ಪಾಟೀಲ ಹಾಗು ವ್ಹಿ. ವ್ಹಿ. ಪಾಟೀಲರಿಗೆ ಒಂದೊಂದರಂತೆ ಹಂಚಬೇಕು.

ಕ. ಪ್ರಾಂ. ಕಾಂ. ಕ. ಅಧ್ಯಕ್ಷರು ಪ್ರಕಟನೆಯೊಂದನ್ನು ಹೊರಡಿಸಿ ತಾ.೧ನೇ ದಿನ ಕರ್ನಾಟಕ ಪಾರ್ಲಮೆಂಟರಿ ಸಭೆಯಲ್ಲಿ ನಡೆದ ದುರ್ಘಟನೆ ಮತ್ತು ಅದಕ್ಕೆ ಹೊಣೆಗಾರರಿದ್ದ ವ್ಯಕ್ತಿಗಳ ಮೇಲೆ ಶಿಸ್ತಿನ ಕ್ರಮ ತೆಗೆದುಕೊಳ್ಳುವ ಕಾರ್ಯ ನಡೆದಿದೆಯೆಂದು ತಿಳಿಸಿದ್ದಾರೆ.

ಬ್ಯಾಹಟ್ಟಿ ವೀರನಗೌಡರು, ಕಲ್ಲಪ್ಪ ಅಂದಾನಪ್ಪನವರ ಹಾಗು ಫಕೀರಪ್ಪ ನವಲೂರ ಅವರು ೧೯೪೨ ರಲ್ಲಾದ ಶಿಕ್ಷೆ ಅನುಭವಿಸಿ ನಾಶಿಕ ಜೇಲಿನಿಂದ ಬಿಡುಗಡೆ ಹೊಂದಿ ಬಂದಿರುವರು. ನಾಶಿಕದಲ್ಲಿ ಇನ್ನೂ ಕರ್ನಾಟಕದ ೮ ರಾಜಕೀಯ ಕೈದಿಗಳಿರುವರು.

ಗದಗದಲ್ಲಿಯ ಭಾವಸಾರ ಕ್ಷತ್ರಿಯರು ಸಭೆ ಸೇರಿ ಚುನಾವಣೆಯಲ್ಲಿ ಕಾಂಗ್ರೆಸ್ಸಿಗೇ ಬೆಂಬಲ ಕೊಡಲು ಠರಾವು ಮಾಡಿದರು.

ಹುಬ್ಬಳ್ಳಿ ಸೆಟಲ್‌ಮೆಂಟ ಫುಟಬಾಲ ಪಂದ್ಯಾಟದಲ್ಲಿ ಮುಸ್ಲಿಂ ಸ್ಪೋರ್ಟ್ಸ ಕ್ಲಬ್ಬಿನವರು ರೇಲ್ವೆ ಕ್ಲಬ್ಬಿನವರನ್ನು ಸೋಲಿಸಿ ೩ ನೇ ವರ್ಷ ಪುನಃ ಟ್ರೋಫಿ ಪಡೆದುಕೊಂಡರು.

ಶಿಗ್ಗಾವಿ ತಾಲೂಕ ಮತ್ತಿಗಟ್ಟೆಯಲ್ಲಿ ಓರ್ವ ಹೆಣ್ಣುಮಗಳು ಒಂದೇ ಕಾಲಕ್ಕೆ ೪ ಮಕ್ಕಳನ್ನು ಹಡೆದಿದ್ದು ೨ ಸತ್ತು ೨ ಜೀವಂತವಿವೆ.

ಜಿಲ್ಹಾ ಮ್ಯಾಜಿಸ್ಟ್ರೇಟರು ಒಂದು ಪ್ರಕಟನೆ ಹೊರಡಿಸಿ ಧಾರವಾಡ, ಕಲಘಟಗಿ, ಹಾನಗಲ್ಲ ಹಾಗು ಹಿರೇಕೆರೂರ ತಾಲೂಕುಗಳನ್ನು ಪ್ಲೇಗ ದೂಷಿತ ಪ್ರದೇಶಗಳೆಂದು ಸಾರಿದ್ದಾರೆ, ಕೆಳಗಿನ ಸ್ಥಳಗಳಲ್ಲಿ ಪ್ಲೇಗದಿಂದ ಪೀಡಿತರ ಹಾಗು ಮರಣಪಟ್ಟವರ ಸಂಖ್ಯೆ ಈ ರೀತಿ ಇದೆ. ತಿಳವಳ್ಳಿ ೧೫-೪ ಶಿರಗಂಬಿ ೬೬-೧೨ ಚಿನ್ನ ಮುಳಗುಂದ ೩-೩ ಹಿರೇಕೆರೂರ ೩೩-೧೭ ಚಿಕ್ಕಬಾಸೂರು ೧೪-೭ ದರಲಗೊಂಡಿ ೩-೦ ಮದನಭಾವಿ ೧೯-೪ ಕಾಮಧೇನು-ಇಲಿ ಬೀಳಹತ್ತಿವೆ.

## ಕಾರವಾರ

ಕಾರವಾರ ರಾಷ್ಟ್ರಸೇವಾ ದಲದವರು ತಾ. ೧೪ ನೇ ದಿನ ಅರ್ಬುದ ವ್ಯಾಯಾಮಶಾಲೆಯಲ್ಲಿ ಸಾರ್ವಜನಿಕ ಸಭೆ ಜರುಗಿಸಿ ಇತ್ತೀಚೆಗೆ ಯುರೋಪದಿಂದ ಮರಳಿ ಬಂದ ಶ್ರೀ ದಿನಕರ ದೇಸಾಯಿಯವರನ್ನು ಸತ್ಕರಿಸಿದರು. ಸಭೆಯಲ್ಲಿ ಕಲಕತ್ತೆಯ ಗೋಳೀಬಾರು ನಿಷೇಧಿಸಲ್ಪಟ್ಟಿತು.

ಕಾರವಾರ ಜಿಲ್ಹೆಯ ಗೌಡಸಾರಸ್ವತರು ಹಾಗು ದೈವಜ್ಞರು ಮೂಲ ಗೋವಾ ನಿವಾಸಿಗಳಿದ್ದು ೧೬ ನೇ ಶತಮಾನದಲ್ಲಿ ಅಲ್ಲಿಂದ ಗುಳೇ ಬಂದವರಾದ್ದರಿಂದ ದತ್ತಕ ವಿಷಯದಲ್ಲಿ ಅವರಿಗೆ ಮುಂಬಯಿ ಹಿಂದೂ ಕಾಯದೆ ಅನ್ವಯಿಸುವದೆಂದೂ ಮದ್ರಾಸ ಕಾಯದೆ ಅನ್ವಯಸುವದಿಲ್ಲೆಂದೂ ಜಿಲ್ಹಾ ಜಜ್ಜರು ಒಂದು ಖಟ್ಲೆಯಲ್ಲಿ ತೀರ್ಪು ಕೊಟ್ಟಿರುವರು.

ಶ್ರೀ ಗೋಪಿಯವರು ಮುಂಬಯಿ ವಿಧಿಮಂಡಳಕ್ಕೆ ಅವಿರೋಧ ಆರಿಸಿ ಬಂದ ಬಗ್ಗೆ ಗೋಕರ್ಣ ಕರ್ನಾಟಕ ಸಂಘದಲ್ಲಿ ಶ್ರೀ ಮಾವಿನಕುರ್ವೆಯವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಅವರನ್ನು ಅಭಿನಂದಿಸಲಾಯಿತು. . ಶ್ರೀ ಗೌರೀಶ ಕಾಯ್ಕಿಣಿಯವರು ಶ್ರೀ ಗೋಪಿಯವರಿಂದಾದ ಸೇವೆ ತಿಳಿಸಿದರು. ಶ್ರೀ ಮಾವಿನಕುರ್ವೆಯವರು ಜಾತೀಯತೆ ಹೋಗಬೇಕು ಈಗ ನಿಂತಿರುವ ಕಾಂಗ್ರೆಸ ಹುರಿಯಾಳುಗಳಿಗೇ ಎಲ್ಲರೂ ಬೆಂಬಲ ಕೊಟ್ಟು ಎದುರಾಳಿಗಳ ಠೇವು ಜಪ್ತ ಮಾಡಿಸಬೇಕೆಂದು ಹೇಳಿದರು ಕರ್ನಾಟಕ ಸಂಘಕ್ಕೆ ಪುನಃ ಶ್ರೀ ಗೋಪಿಯವರೇ ಅಧ್ಯಕ್ಷರಾಗಿ ಆರಿಸಲ್ಪಟ್ಟರು.

ಕಾರವಾರ ತಾಲೂಕಿನ ಮೀನಗಾರರು ಬಿಣಗೆಯಲ್ಲಿ ಸಭೆ ಸೇರಿ ಮೀನ ಖಾತೆ ಡಾಯರೆಕ್ಟರರನ್ನು ಸಭೆಗೆ ಆಮಂತ್ರಿಸಿ ತಮ್ಮ ದೂರುಗಳನ್ನು ಅವರ ಮುಂದಿಟ್ಟರು. ಅವರು ಒಂದು ಮೋಟಾರ ಹಾಗು ಲಾಂಚ ಕೊಡಿಸುವ ವ್ಯವಸ್ಥೆ ಮಾಡುವೆವಾಗಿ ತಿಳಿಸಿದರು ಹಾಗು ಉಪ್ಪಿನ ದರವನ್ನು ಇಳಿಸಲಾಗುವದೆಂದು ಹೇಳಿದರು.

## ಬಳ್ಳಾರಿ

೨೨ನೇ ಆರ್ಯ ವೈಶ್ಯ ಮಹಾಸಭೆ, ಆರ್ಯ ವೈಶ್ಯ ಯುವಜನ ಸಭೆ, ಮಹಿಳಾ ಸಭೆ ಮೊದಲಾದವುಗಳು ಕಳೆದ ವಾರ ಬಳ್ಳಾರಿಯಲ್ಲಿ ವಿಜೃಂಭಣೆಯಿಂದ ಸಾಂಗವಾದವು.

ಜಿಲ್ಹಾ ಕ್ಷಾಮ ನಿವಾರಣ ಸಮಿತಿಗೆ ಶ್ರೀ ಟಿ. ಸುಬ್ರಹ್ಮಣ್ಯಮರು ಅಧ್ಯಕ್ಷರು, ಶ್ರೀ ಡಿ. ಎಚ್. ಹಣಮಂತರಾಯರು, ಶ್ರೀ ಎಚ್. ಲಿಂಗಾರಡ್ಡಿಯವರು ಉಪಾಧ್ಯಕ್ಷರು, ಗುಡದೂರ ಪದ್ಮನಾಭಪ್ಪನವರು ಕೋಶಾಧಿಕಾರಿಗಳು, ಜಿ. ನಾಗಭೂಷಣ ಹಾಗು ಡಿ. ಎಚ್. ವೆಂಕೋಬರಾಯರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟಿದ್ದಾರೆ.

ಆದವಾನಿ ನಗರ ಸಭೆಯ ಕಸಗುಡಿಸುವವರು ತಮ್ಮ ಬೇಡಿಕೆಗಳ ಸಂಬಂಧದಲ್ಲಿ ಮ್ಯುನಸಿಪಾಲಿಟಿಗೆ ೧೫ ದಿವಸದ ನೋಟೀಸು ಕೊಟ್ಟು ಅಷ್ಟರಲ್ಲಿ ಅವು ಮಾನ್ಯವಾಗದಿದ್ದರೆ ಸಂಪು ಹೂಡುವದಾಗಿ ತಿಳಿಸಿದ್ದರಿಂದ ಮ್ಯುನಸಿಪಾಲಿಟಿ ಸಬ್ ಕಮೀಟಿಯವರು ಅವರ ಪ್ರತಿನಿಧಿಗಳೊಡನೆ ಮಾತುಕತೆ ನಡಿಸಿದರು.ಆದರೆ ಕೆಲಸದಿಂದ ತೆಗೆದ ಮೂವರನ್ನು ತಿರುಗಿ ತೆಗೆದುಕೊಳ್ಳಲು ಕಮೀಟಿಯವರು ಸಿದ್ಧರಿಲ್ಲದ್ದರಿಂದ ಮಾತುಕತೆ ಯಶಸ್ವಿಯಾಗಲಿಲ್ಲ.

ಹೊಸಪೇಟೆ ಮುನಸಿಪಲ ಹಾಯಸ್ಕೂಲಿನ ವಾರ್ಷಿಕೋತ್ಸವವು ತಾ. ೨೩ನೇ ದಿನ ಪ್ರೊ. ಜಾಗೀರದಾರರ ಅಧ್ಯಕ್ಷತೆಯಲ್ಲಿ ಸಾಂಗವಾಯಿತು ಆಟಪಾಟ, ಸ್ಪರ್ಧೆ, ಭಾಷಣ, ನಾಟಕ ಮೊದಲಾದ ಕಾರ್ಯಕ್ರಮಗಳು ಏರ್ಪಡಿಸಲ್ಪಟ್ಟಿದ್ದವು.

---

ಹುತಾತ್ಮ ತಿಮ್ಮನಗೌಡ ಸ್ಮಾರಕ ನಿಧಿಗೆ ಈ ವರೆಗೆ ೩೪೫೦ ರೂ. ಕೂಡಿದೆ.

ಹುಬ್ಬಳ್ಳಿ ನಗರದಲ್ಲಿಯ ಅಂಚೆ ತಂತಿ ಖಾತೆಯ ಪೇದೆಗಳು "ಹಸಿದ ಪೋಸ್ಟಮನ್ ಬಿಲ್ಲೆ"ಯನ್ನು ಹಚ್ಚಿಕೊಂಡು ತಿರುಗಾಡುತ್ತಿರುವರು.

ಗದಗದಲ್ಲಿ ತಾ. ೧೩ ನೇ ದಿನ ಕ್ಯಾಪ್ಟನ್ ಅಬ್ದುಲ್ ರಶೀದರ ಶಿಕ್ಷೆ ನಿಷೇಧಾರ್ಥವಾಗಿ ಮೆರವಣಿಗೆ ಸಭೆಗಳು ಜರುಗಿ ಶ್ರೀಯುತರಾದ ದೊಡ್ಡಮೇಟಿ, ಹುಕ್ಕೇರಿಕರ, ನೇಶ್ವಿ, ದುಂದೂರ ಅವರ ಭಾಷಣಗಳಾದವು.

## ಬೆಳಗಾವಿ

ಬೆಳಗಾವ ಜಿಲ್ಹಾ ಕಾಂಗ್ರೆಸ ಚುನಾವಣೆ ಮಂಡಳದವರು ಕಾಂಗ್ರೆಸ ಹುರಿಯಾಳುಗಳು ಸುಲಭವಾಗಿ ಆರಿಸಿ ಬರುವಂತೆ ಉತ್ತರ ಭಾಗದಲ್ಲಿಯ ಮತಗಳನ್ನು ಮೂವರೂ ಉಮೇದವಾರರಲ್ಲಿ ಕೆಳಗಿನಂತೆ ಹಂಚಿದ್ದಾರೆ ಆ ಆ ಸ್ಥಳಗಳಲ್ಲಿಯ ಮತದಾರರು ಅದರಂತೆಯೆ ಮತ ಹಾಕಬೇಕು. ೧ ಶ್ರೀ ಎಂ. ಪಿ. ಪಾಟೀಲ- ಚಿಕ್ಕೋಡಿ, ಕಬ್ಬೂರ, ಕರೋಶಿ, ಅಂಕಲೆ, ಕೇಂದ್ರಗಳು; ಕಣಗಲೆ ಕೇಂದ್ರ ಬಿಟ್ಟು ಹುಕ್ಕೇರಿ ತಾಲೂಕಿನ ಯಾವತ್ತೂ ಕೇಂದ್ರಗಳು, ಗೋಕಾಕ ತಾಲೂಕಿನಲ್ಲಿ ಗೋಕಾಕ ನಗರ, ಮಮದಾಪುರ, ಖನಗಾವಿ, ಅಂಕಲಗಿ, ಕೊಣ್ಣೂರ, ಅರಭಾವಿ, ಮುದವಾಲ ಕೇಂದ್ರಗಳು; ಶ್ರೀ ಲಠ್ಠೆ:— ಚಿಕ್ಕೋಡಿ ತಾಲೂಕಿನಲ್ಲಿ ಚಿಕ್ಕೋಡಿ, ಕಬ್ಬೂರ, ಕರೋಶಿ, ಅಂಕಲೆ ಈ ನಾಲ್ಕು ಕೇಂದ್ರ ಬಿಟ್ಟು ಯಾವತ್ತೂ ಕೇಂದ್ರಗಳು. ಹುಕ್ಕೇರಿ ತಾಲೂಕಿನಲ್ಲಿ ಕಣಗಲೆ ಕೇಂದ್ರ, ಅಥಣಿ ತಾಲೂಕಿನಲ್ಲಿ ಶೇಡಬಾಳ ಕೇಂದ್ರ; ಶ್ರೀ ರಾಘವೇಂದ್ರರಾವ ಕುಲಕರ್ಣಿ:- ಅಥಣಿ ತಾಲೂಕಿನಲ್ಲಿ ಶೇಡಬಾಳ ಕೇಂದ್ರ ಬಿಟ್ಟು ಯಾವತ್ತೂ ಕೇಂದ್ರಗಳು, ಗೋಕಾಕ ತಾಲೂಕಿನಲ್ಲಿ ಕಲ್ಲೊಳ್ಳಿ, ಮೂಡಲಗಿ, ಕೌಜಲಗಿ, ಸುಣಧೋಳಿ, ಯಾದವಾಡ, ತಳಕಟ್ಟನಾಳ, ಹಳ್ಳೂರ, ತೊಂಡಿಕಟ್ಟಿ ಕೇಂದ್ರಗಳು

ಶ್ರೀ ಹೂಲಿ ವೆಂಕರಡ್ಡಿಯವರು ಗೋಕಾಕ ತಾಲೂಕಿನ ಪೂರ್ವ ಭಾಗದಲ್ಲಿ ಹೋದಾಗ ತೊಂಡಿಕಟ್ಟಿ, ಗುತ್ತಿಗೋಳಿ, ಕಮಕೇರಿ, ಬುದ್ನಿ, ಹೊಸಕೋಟೆ ಭಾಗಗಳ ಜನರು ಅವರನ್ನು ಸತ್ಕರಿಸಿ ೩೪೧ ರೂ. ನಿಧಿ ಅವರಿಗೆ ಅರ್ಪಿಸಿದರು. ಸಭೆಗಳಲ್ಲಿ ಶ್ರೀ ವೆಂಕರಡ್ಡಿ ಹಾಗು ಶ್ರೀರಂಗ ಕಾಮತರ ಭಾಷಣಗಳಾದವು.

ಗೋಕಾಕ ಶಿಕ್ಷಕರು ತಾ. ೧ ರಿಂದ ಸಂಪು ಹೂಡಲು ನಿಶ್ಚಯಿಸಿದ್ದಾರೆ. ಸಾರ್ವಜನಿಕರು ಅವರಿಗೆ ಸಹಾಯದ ಆಶ್ವಾಸನವಿತ್ತಿರುವರು.

ಶ್ರೀ ಪಡಗಾನೂರ ಶಂಕರಗೌಡರು ಕಳೆದವಾರ ಚಿಕ್ಕೋಡಿ, ಚಿಂಚಣಿ, ಕೋಥಳಿ, ಎಕ್ಸಂಬಾ ಭಾಗದಲ್ಲಿ ಸಂಚರಿಸಿ ರಾಷ್ಟ್ರೀಯ ಕೀರ್ತನ ಮಾಡಿ ಚುನಾವಣೆ ವಿಷಯವಾಗಿ ಜಾಗ್ರತಿ ಮಾಡಿದರು.

ಕಿತ್ತೂರ ಸೋಮವಾರಪೇಟೆ ನೇಕಾರ ಚೌಕದಲ್ಲಿ ತಾ. ೧೬ನೇ ದಿನ ಶ್ರೀ ನೇಮಚಂದ್ರಪ್ಪ ಮುನವಳ್ಳಿ ಅವರ ಅಧ್ಯಕ್ಷತೆಯಲ್ಲಿ ಸಭೆ ಜರುಗಿ ಚೌಕಿಗೆ ಗಾಂಧಿ ಚೌಕ ಎಂದು ಹೆಸರಿಡಲಾಯಿತು.

## ಸಂಸ್ಥಾನಗಳು

ದಾವಣಗೆರೆ ಸಂಸ್ಕೃತ ಪ್ರಚಾರ ಸಂಘದವರು ತಾ. ೧೮ನೇ ದಿನ ಶ್ರೀ ಅನಂತರಾವ ಅಸುಂಡಿಯವರ ಅಧ್ಯಕ್ಷತೆಯಲ್ಲಿ ಸಂಸ್ಕೃತ ಮಹೋತ್ಸವ ಜರುಗಿಸಿದರು. ವಿದ್ವಾನ್ ಸೀತಾರಾಮಾಚಾರ್ಯ, ಪಂ. ಬುರ್ಲಿ ಶ್ರೀನಿವಾಸಾಚಾರ್ಯ, ಪಂಢರಿನಾಥಾಚಾರ್ಯ ಗಲಗಲಿ ಮೊದಲಾದವರ ಭಾಷಣಗಳಾದವು.

ಮೈಸೂರ ಕಾಂಗ್ರೆಸ ಅಧ್ಯಕ್ಷರು ತಾ. ೧೬ ರಿಂದ ಶಿವಮೊಗ್ಗಾ ಜಿಲ್ಹಾ ಪ್ರವಾಸ ಕೈಕೊಂಡಿದ್ದು ಶಿವಮೊಗ್ಗಾದಲ್ಲಿ ಭಾಷಣ ಮಾಡುತ್ತ ಅವರು ಸದ್ಯದ ಆಹಾರ ವಿಪತ್ತಿಗೆ ಸರಕಾರದವರು ಮಾಡುತ್ತ ಬಂದ ತಪ್ಪುಗಳೇ ಕಾರಣವೆಂದೂ ಲೋಕಪ್ರಿಯ ಹಾಗು ಜವಾಬದಾರಿ ಸರಕಾರದ ಹೊರತು ಪರಿಸ್ಥಿತಿ ಸುಧಾರಿಸದೆಂದೂ ಹೇಳಿದರು.

ಶಿವಮೊಗ್ಗೆಯಲ್ಲಿ ಎಸ್. ಎಸ್. ಎಲ್. ಸಿ. ಕ್ಲಾಸಿನಲ್ಲಿದ್ದ ಜಿ. ಎಂ. ಪರಮೇಶ್ವರಪ್ಪ ಎಂಬ ವಿದ್ಯಾರ್ಥಿಯು ತುಂಗಾ ನದಿಯಲ್ಲಿ ಹೊನ್ನಾಳಿ ಸೇತುವೆ ಮೇಲಿಂದ ಹಾರಿ ಆತ್ಮಹತ್ಯೆ ಮಾಡಿಕೊಂಡನು. ಕಾರಣ ಗೊತ್ತಾಗಿಲ್ಲ.

ಶ್ರೀ ಶಂಕರರಾವ ದೇವ ಅವರು ತಾ. ೨೭ನೇ ದಿನ ಸಾಂಗಲಿಗೆ ಬಂದು ಸಾಂಗಲಿ ಅಧಿಪತಿಗಳ ಸಲಹೆಗಾರರಾದ ಶ್ರೀ ಬಿ. ಎನ್. ಡೇ ಅವರನ್ನು ಕಾಣಲಿರುವರು.

ಮಹಾಲಿಂಗಪುರದಲ್ಲಿ ಸೇವಾದಲ ಶಿಕ್ಷಣ ವರ್ಗವು ತೆರೆಯಲ್ಪಟ್ಟು ೨೦ ವಿದ್ಯಾರ್ಥಿಗಳು ತರಬೇತು ಹೊಂದಿದರು.

## ವಿಜಾಪುರ

ಕಾಂಗ್ರೆಸ ಚುನಾವಣೆ ಪ್ರಚಾರ ಭರದಿಂದೆ ಸಾಗಿದೆ. ದಕ್ಷಿಣ ಭಾಗದಲ್ಲಿ ಶ್ರೀ ಕಂಠಿ ಹಾಗು ಅಂಬಲಿಯವರು ತಮ್ಮ ಮಿತ್ರರೊಂದಿಗೆ ಹಳ್ಳಿಗಳಲ್ಲಿ ಸಂಚರಿಸುತ್ತಿರುವರು. ಪ್ರಾಂತಿಕ ಚುನಾವಣೆ ಮಂಡಳದವರು ಶ್ರೀ ಕುರ್ತಕೋಟಿ, ಅಂದಾನೆಪ್ಪ ಕೌದಿ ಅವರನ್ನು ಜಿಲ್ಹೆಯಲ್ಲಿ ಪ್ರಚಾರ ಸಲುವಾಗಿ ಕಳಿಸಿದ್ದಾರೆ. ಎಲ್ಲೆಲ್ಲಿಯೂ ಕಾಂಗ್ರೆಸ್ಸಿಗೆ ಬೆಂಬಲ ಸಿಗುತ್ತಿರುವದು.

ಬಾಗಲಕೋಟೆಯ ಗೋಡಾವುನ್ ಕೀಪರರಾದ ಶ್ರೀ ಮಹಾಂತಪ್ಪ ಚನಬಸಪ್ಪ ಕಲಬುರ್ಗಿ ವಕೀಲ ಅವರು ಗುದಾಮಿನಿಂದ ೧ ಚೀಲ ಅಕ್ಕಿ ಹಾಗು ೧ ಚೀಲ ಗೋದಿ ಅನಧಿಕೃತವಾಗಿ ಒಯ್ದ ಬಗ್ಗೆ ಹಾಗು ಗುದಾಮಿನಲ್ಲಿ ೭ ಚೀಲ ಸಜ್ಜೆ ನುಗ್ಗಾಟ ಮಾಡಿ ಅವರ ಹಣ ಅಫರಾತಫರ ಮಾಡಿದ ಬಗ್ಗೆ ಜಿಲ್ಹಾ ಜಜ್ಜರಲ್ಲಿ ಅವರ ವಿಚಾರಣೆ ನಡೆದು ಅವರಿಗೆ ೬ ತಿಂಗಳ ಕಠಿಣ ಕೈದು ೧೦೦೦ ರೂ. ದಂಡ ವಿಧಿಸಲಾಯಿತು.

ಲಲಿತ ಕಲಾಕುಂಜ ಕಂಪನಿಯವರು ಕಳೆದ ಅಕ್ಟೋಬರದಲ್ಲಿ ಬಾಗಲಕೋಟೆಯಲ್ಲಿ ಭಾವಬಂಧನ ನಾಟಕವಾಡಿದಾಗ ಸಂಭವಿಸಿದ ಗಲಭೆ ಬಗ್ಗೆ ಬಂಧಿತರಾದವರ ವಿಚಾರಣೆಯು ರೆಸಿಡೆಂಟ ಕೋರ್ಟಿನಲ್ಲಿ ಸುರುವಾಗಿದ್ದು ಮೊದಲನೆ ದಿನ ನಾಟಕ ಮ್ಯಾನೇಜರರ ಜವಾಬು ಆಯಿತು. ಫಿರ್ಯಾದ ಮಾಡುವದು ತಮ್ಮ ಮನಸ್ಸಿನಲ್ಲಿದ್ದಿಲ್ಲವೆಂದೂ ಶ್ರೀ ರಾಣೇಬಿನ್ನೂರ ಫೌಜದಾರರು ತಮಗೆ ಆಗ್ರಹ ಮಾಡಿದರೆಂದೂ ಜನರು ಕಲ್ಲು ಒಗೆದದ್ದರಿಂದ ನಾಟಕವು ಬಂದಾಯಿತೆಂದೂ ಬಲ್ಬು, ಕಾಜು ಮೊದಲಾದವು ಒಡೆದು ೧೦೦ ರೂ. ಹಾನಿಯಾಯಿತೆಂದೂ ದೊಂಬಿಗೆ ಆರೋಪಿತರ ಸಂಬಂಧವಿದೆಯೆಂದು ಹೇಳಲಾರೆನೆಂದೂ ಹೇಳಿದರು.

ಚಡಚಣ ಸಂಗಮೇಶ್ವರ ಜಾತ್ರೆಯಲ್ಲಿ ಶೇತಕಿ ಪ್ರದರ್ಶನ, ಕುಸ್ತಿ, ಶ್ರೀ ಮುನವಳ್ಳಿ ವಕೀಲ ಹಾಗು ರಾ. ಬ. ಹಳಕಟ್ಟಿಯವರಿಗೆ ಮಾನಪತ್ರ ಅರ್ಪಣ ಮೊದಲಾದ ಕಾರ್ಯಕ್ರಮ ಜರುಗಿದವು.

ಕಲೆಕ್ಟರರು ಅಮೀನಗಡಕ್ಕೆ ಭೆಟ್ಟಿ ಕೊಟ್ಟಾಗ ನೇಕಾರರು ಅವರನ್ನು ಕಂಡು ಈಗ ಹಂಚುತ್ತಿರುವ ನೂಲು ಸಾಕಾಗುತ್ತಿರುವದಿಲ್ಲೆಂದು ಹೇಳಿದರು. ಅವರು ಮಾರ್ಚ ತಿಂಗಳಲ್ಲಿ ಹೆಚ್ಚು ಕೊಡಲಾಗುವದಾಗಿ ತಿಳಿಸಿದರು.

ಜಿಲ್ಹೆಯಲ್ಲಿ ಮತ್ತೆ ೧೫೫ ಹಳ್ಳಿಗಳಲ್ಲಿ ಸರಕಾರದವರು ಬರಗಾಲ ಸಾರಿದ್ದಾರೆ.

ವಿಜಾಪುರದಲ್ಲಿ ಪ್ಲೇಗು ಬಲಿಯಹತ್ತಿದ್ದು ಈ ವರೆಗೆ ೩೨ ಜನರು ಪೀಡಿತರಾಗಿ ೧೮ ಜನರು ಸತ್ತಿರುವರು. ಇನಾಕುಲೇಶನ್ ಇನ್ನೂ ಜೋರಿನಿಂದೆ ಸಾಗಿಲ್ಲ.

ಮಾರ್ಚ ೧ ಕ್ಕೆ ಸಂಪು ಹೂಡುವ ನಿರ್ಧಾರವನ್ನು ಜಿಲ್ಹಾ ಶಿಕ್ಷಕ ಸಂಘದವರು ಮಾಡಿದ್ದಾರೆ. ರಾ ಬ ಹಳಕಟ್ಟಿಯವರು ಸಂಘದ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ಕೊಟ್ಟದ್ದು ಶ್ರೀ ದಾಬೆಯವರು ಅಧ್ಯಕ್ಷರಾಗಿರುವರು.

ಹುನಗುಂದ ತಾಲೂಕ ಶಿಕ್ಷಕ ಶಿಕ್ಷಕಿಯರು ತಾ. ೧೭ ನೇ ದಿನ ಶ್ರೀ ರೇವಡಿ ವಕೀಲರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ತಾ. ೧ ರಿಂದ ಸಂಪು ಹೂಡಲು ನಿಶ್ಚಯಿಸಿದರು. ಸಭೆ ನಡೆವಾಗ ಶ್ರೀ ಕಂಠಿ ವಕೀಲ ಹಾಗು ಶ್ರೀ ಅಂಬಲಿಯವರು ಅಕಸ್ಮಾತ್ ಬಂದು ತಮ್ಮ ಸಹಾನುಭೂತಿ ವ್ಯಕ್ತ ಮಾಡಿ ನಾಲ್ಕು ಮಾತು ಹೇಳಿದರು.

---

ಶಿವಮೊಗ್ಗಾ ಜಿಲ್ಹಾ ಬರಗಾಲ ಪರಿಹಾರ ಸಮಿತಿಯವರು ಆಹಾರ ಬೆಳೆ ಹೆಚ್ಚು ಬೆಳೆಯಲು ರೈತರಿಗೆ ಪ್ರತಿಯೊಂದು ಪಲ್ಲಾಕ್ಕೆ ೫ ರೂಪಾಯಿ ಕೊಡಬೇಕೆಂದೂ ಕೊಬ್ಬರಿ ಹಾಗೂ ಬೆಲ್ಲದ ನಿರ್ಯಾತಕ್ಕೆ ಪ್ರತಿಬಂಧ ಹಾಕಬೇಕೆಂದೂ ಸರಕಾರಕ್ಕೆ ಕೇಳಿಕೊಂಡಿದ್ದಾರೆ.

ಸಾಂಗಲಿ ಪ್ರಾಥಮಿಕ ಶಿಕ್ಷಕ ಸಂಘದವರು ಹಿಂದಿನ ಶಿಕ್ಷಣ ಮಂತ್ರಿಗಳಾದ ಶ್ರೀ ಅಶ್ವತ್ಥರಾವ ಮಹಿಷಿ ಅವರ ಅಧ್ಯಕ್ಷತೆಯಲ್ಲಿ ತಾ. ೩-೩-೪೬ನೇ ದಿನ ಶಹಾಪುರದಲ್ಲಿ ಜೀವನ ವೇತನ ಸಂಬಂಧದಲ್ಲಿ ಶಿಕ್ಷಕರ ಸಭೆ ಕರೆದಿದ್ದಾರೆ.

## ಮುಂಬಯಿ

ಮಹಾತ್ಮಾ ಗಾಂಧಿಯವರು ತಮ್ಮ ಪರಿವಾರದೊಂದಿಗೆ ಮುಂಬಯಿ ಮೇಲಿನಿಂದ ವರ್ಧಾದಿಂದ ಮುಂಬಯಿಗೆ ಬರುತ್ತಿರುವಾಗ ಹಾದಿಯಲ್ಲಿ ಇಂಜಿನದ ಮುಖ್ಯಗಾಲಿ ಹಾಗು ಪಿಸ್ಟನದ ಮುಖ್ಯ ರಾಡ್ ಒಮ್ಮೆಲೆ ಮುರಿದು ಹೋದ್ದರಿಂದ ಅಪಘಾತವುಂಟಾಯಿತು. ಆದರೆ ಡ್ರಾಯವ್ಹರನು ಒಮ್ಮೆಲೆ ಗಾಡಿ ನಿಲ್ಲಿಸಿದ್ದರಿಂದ ಹೆಚ್ಚಿನ ಗಂಡಾಂತರ ತಪ್ಪಿತು. ಮುಂದೆ ದೇವಲಾಲಿಯಿಂದ ಎಂಜಿನ ಬಂದು ಗಾಡಿಯನ್ನು ಹಿಂದಿನ ಸ್ಟೇಶನಕ್ಕೆ ಒಯ್ಯಿತು. ಅಲ್ಲಿ ಎರಡು ಮಿಲಿಟರಿ ಸ್ಪೇಶಲ್‌ಗಳೂ ಈ ಅಪಘಾತ ಮೂಲಕ ತಡೆಹಿಡಿಯಲ್ಪಟ್ಟಿದ್ದವು. ಆದರೆ ಒಂದು ಇಂಜಿನನ್ನು ಮುಂಬಯಿ ಮೇಲಿಗೆ ಹಚ್ಚಿ ಮೇಲನ್ನು ಬಿಡಲಾಯಿತು. ಮಿಲಿಟರಿ ಸ್ಪೆಶಲದಲ್ಲಿಯ ವಿದೇಶಿ ಹಾಗು ಹಿಂದೀ ಸೈನಿಕರು ಮಹಾತ್ಮರ ಸುತ್ತಲೂ ಬಂದು ನೆರೆದು ಅವರ ದರ್ಶನ ತೆಗೆದುಕೊಂಡು ಹರಿಜನ ನಿಧಿಗೆ ಹಣ ಸಲ್ಲಿಸಿದರು.

ಮಹಾತ್ಮರು ಮುಂಬಯಿಗೆ ಬಂದ ಕೂಡಲೆ ಬಿರ್ಲಾ ಭವನಕ್ಕೆ ತೆರಳುವಾಗ ಭುಲಾಭಾಯಿ ದೇಸಾಯಿಯವರಲ್ಲಿ ಹೋಗಿ ಅವರ ಕ್ಷೇಮಸಮಾಚಾರ ಕೇಳಿಕೊಂಡರು.

ಕಸ್ತೂರಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ಟ್ರಸ್ಟಿಗೆ ಗುಜರಾಥ ಬಗ್ಗೆ ಸಂಲಾಬೇನ ಸಾರಾಭಾಯಿಯವರು ಏಜಂಟರಾಗಿ ನೇಮಿಸಲ್ಪಟ್ಟಿದ್ದಾರೆ.

ಹೆಬ್ಬಟ್ಟಿನ ಗುರುತು ಕೊಡದ್ದಕ್ಕೆ ರತ್ನಾಗಿರಿಯ ಮಹತಪ ಹಾಗು ನಿಪ್ಪಾಣಿಯ ಪಾರಖೆ ಅವರಿಗೆ ಬೆಳಗಾವಿಯ ಅಸಿಸ್ಟಂಟ ಜಜ್ಜರು ೨ ತಿಂಗಳ ಶಿಕ್ಷೆ ವಿಧಿಸಿದರು.

ರೇಲ-ರೋಡ ಯೋಜನೆಯಲ್ಲಿ ಪೂರ್ವಖಾನದೇಶದ ನೇ ರ್ಯೋನ ಕಂಪನಿಗೆ ಮ್ಯಾನೇಜಿಂಗ ಡಾಯರೆಕ್ಟರರಾಗಿ ನೇಮಿಸಲ್ಪಟ್ಟಿದ್ದ ಶ್ರೀ ಭೆಲ್ಸೆಕರರು ರಾಜೀನಾಮೆ ಕೊಟ್ಟಿದ್ದಾರೆ.

ಲಂಡನ್ ಫೇಬಿಯನ್ ಸಂಘದವರು ಕೆ. ಎಂ ಮುನಸಿಯವರಿಗೆ ತಮ್ಮ ಪರಿಷತ್ತಿಗೆ ಬರಲು ಆಮಂತ್ರಣ ಕಳಿಸಿದ್ದರಿಂದ ಅವರು ಮಾರ್ಚದಲ್ಲಿ ಲಂಡನಕ್ಕೆ ಹೋಗಲಿರುವರು.

ಮುಂಬಯಿ ಸರಕಾರದ ಸಲಹೆಗಾರರಾದ ಸರ್ ಹೆನ್ರಿ ನಾಯಿಟರು ಆಹಾರ ಪರಿಸ್ಥಿತಿ ಸಂಬಂಧದಲ್ಲಿ ತಾ. ೧೮ನೇ ದಿನ ಪತ್ರಿಕೋದ್ಯೋಗಿಗಳ ಸಭೆ ಸೇರಿಸಿ ಪ್ರಾಂತದ ಸೀದಾಪ್ರಮಾಣವನ್ನು ೧೦೦ಕ್ಕೆ ೨೫ ರಷ್ಟು ಕಡಿಮೆ ಮಾಡಲಾಗುವದೆಂದೂ ನವೆಂಬರ ಕೊನೆಯ ವರೆಗೆ ೧೩ ಲಕ್ಷ ೫ ಸಾವಿರ ಟನ್ ಆಹಾರ ಧಾನ್ಯ ಬೇಕಾಗುತ್ತಿದ್ದು ಹೊರಗಿನಿಂದ ಬರುವದು ಕೂಡಿ ೧೦ ಲಕ್ಷ ೯೯ ಸಾವಿರ ಟನ್ ಪೂರೈಕೆಯಿದೆಯೆಂದೂ ೨ ಲಕ್ಷ ೬೦ ಸಾವಿರ ಟನ್ ಕೊರತೆಯಾಗುವದೆಂದೂ ಡಿಸಂಬರ ತಿಂಗಳಕ್ಕೆ ಬೇಕಾಗುವದನ್ನು ಹಿಡಿದರೆ ೩ ಲಕ್ಷ ೨೩ ಸಾವಿರ ಟನ್ ಕೊರತೆ ಬೀಳುವದೆಂದೂ ಹೇಳಿದರು.

ನರೇಂದ್ರ ಮಂಡಳದ ಚಾನ್ಸಲರರಾದ ಭೋಪಾಳ ನವಾಬರೂ ಆಗಾಖಾನರೂ ತಾ. ೨೫ಕ್ಕೆ ಮಹಾತ್ಮಾ ಗಾಂಧಿಯವರನ್ನು ಪುಣೆಯಲ್ಲಿ ಕಂಡು ಹಿಂದುಸ್ತಾನದ ರಾಜ್ಯಘಟನ ಸಂಬಂಧದಲ್ಲಿ ಚರ್ಚೆ ಮಾಡುವರೆಂದು ತಿಳಿಯುತ್ತದೆ.

ಹಿಂ. ರಾ. ಸೈನ್ಯದ ಕರ್ನಲ ಬೋಸಲೆಯವರು ಅಪಾಯಶದಿಂದ ಬಳಲುತ್ತಿದ್ದುದರಿಂದ ಅಸ್ಪತ್ರೆಗೆ ಹಾಕಲ್ಪಟ್ಟಿರುವರೆಂದು ತಿಳಿಯುತ್ತದೆ.

ಕೆ. ಎಂ. ಮುನಶಿಯವರು ಮಹಾತ್ಮಾ ಗಾಂಧಿಯವರ ಸಲಹೆ ಪ್ರಕಾರ ಪುನಃ ಕಾಂಗ್ರೆಸದಲ್ಲಿ ಬಂದು ಕೂಡಲು ನಿರ್ಧರಿಸಿದ್ದಾರೆ.

## ಓಡಿಸಾ

ಕಾಂಗ್ರೆಸ ಚುನಾವಣೆ ಪ್ರಚಾರ ಸಲುವಾಗಿ ಬಂದ ಸ್ವಯಂಸೇವಕರ ಮೇಲೆ ದಾಳಿ ಮಾಡಿದ್ದಕ್ಕೆ ಖುಂಟಿ ಎಂಬಲ್ಲಿ ೫೪ ಆದಿವಾಸಿಗಳು ಬಂಧಿಸಲ್ಪಟ್ಟಿರುವರು.

ಓಡಿಸಾ ಶಾಸನ ಸಭೆಗೆ ಕಾಂಗ್ರೆಸ ಪರವಾಗಿ ೪೦ ಹುರಿಯಾಳುಗಳನ್ನು ನಿಲ್ಲಿಸಿದ್ದು ಅವರಲ್ಲಿ ವಿಜಯ ಪಟನಾಯಿಕ, ಸಾರಂಗಧರ ದಾಸ, ಎಸ್. ಕಾಂಗೊ, ನವಕೃಷ್ಣ ಚೌಧರಿ, ಮದನಮೋಹನ ಪಟನಾಯಿಕ, ಎಚ್. ಮೆಹತಾಬ, ಮಧುಸೂದನ ಮಹಾಪಾತ್ರ, ಉಮಾಚರಣ ಪಾಟನಾಯಿಕ ಮೊದಲಾದವರು ಮುಖ್ಯರಿರುವರು. ನಾಲ್ಕು ಹರಿಜನ ಸ್ಥಳಗಳು ಈಗಾಗಲೆ ಅವಿರೋಧವಾಗಿ ಸಿಕ್ಕಿವೆ.

# ಹಿಂದುಸ್ಥಾನ

## ಮದ್ರಾಸ

ಮದ್ರಾಸ ಶಾಸನ ಸಭೆಯ ಕೊಕೋನಾಡ ಹಾಗು ಮನ್ನಾರಗುಡಿ ಹರಿಜನಸ್ಥಳಗಳ ಪ್ರಾಥಮಿಕ ಚುನಾವಣೆಯಲ್ಲಿ ಕಾಂಗ್ರೆಸ್ಸಿನ ಹುರಿಯಾಳುಗಳು ಯಶಸ್ವಿಯಾಗಿರುವರು.

ಕೇಂದ್ರ ಕಾಂಗ್ರೆಸ ಚುನಾವಣೆ ಮಂಡಳದವರು ಮದ್ರಾಸ ವಿಧಿಮಂಡಳಕ್ಕೆ ಕೆಳಗಿನವರನ್ನು ಹುರಿಯಾಳುಗಳನ್ನಾಗಿ ಆರಿಸಿದ್ದಾರೆ. ೧ ಸಿ ವೀರಭದ್ರರಾವ ವಿಜಗಪಟ್ಟಂ ೨ ಟಿ ಪುರುಷೋತ್ತಮ ಹಾಗು ೩ ಎಸ್ ರಾಮಭದ್ರರಾಜು ಪೂರ್ವ ಗೋದಾವರಿ ೪ ಮಡ್ಡಿ ಸುದರ್ಶನಂ ಗುಂಟೂರ ೫ ಆರ್ ಬಿ ರಾಮಕೃಷ್ಣ ಚಿತ್ತೂರ ೬ ಎಸ್ ರಂಗಾರಡ್ಡಿ ಕಡಪಾ ೭ ಜಿ ವೆಂಕರಡ್ಡಿ ಅನಂತಪುರ ೮ ಡಾ ಯು ರಾಮರಾವ ಮದ್ರಾಸ ನಗರ ೯ ಕೆ ಎಂ ದೇಶಿಕರ ತಂಜಾವರ ೧೦ ಡಾ ರಾಜನ್ ತ್ರಿಚನಾಪಳ್ಳಿ ೧೧ ಏ ಕೆ ಏ ರಾಮಚಂದ್ರರೆಡ್ಡಿಯರ ಮದುರಾ ೧೨ ಎಸ್ ಜಯರಾಮ ರೆಡ್ಡಿ ರಾಮನಾಡ ೧೩ ರೋಜೆ ವಿಕ್ಟೋರಿಯಾ ಹಾಗು ರೊಡ್ರಿಗಸ ಹಿಂದಿ ವಣಿಕ ಸಂಘ.

ಮದ್ರಾಸ ಶಾಸನ ಸಭೆಗೆ ಆಂಧ್ರದಿಂದ ಕಾಂಗ್ರೆಸ ಪರವಾಗಿ ಏ ಕಾಳೇಶ್ವರರಾವ, ಕಾಲಾ ವೆಂಕಟರಾವ, ಬಿ. ಗೋಪಾಲರೆಡ್ಡಿ, ಕಲ್ಲೂರ ಸುಬ್ಬರಾವ, ಏ. ರಾಯಪ್ಪ, ಎಸ್. ಸಂಜೀವರೆಡ್ಡಿ, ಟಿ. ಪ್ರಕಾಶಂ ಮೊದಲಾದವರು ನಿಲ್ಲಿಸಲ್ಪಟ್ಟಿರುವರು.

ಆಹಾರ ಪೂರೈಕೆಗೆ ಸಂಬಂಧಿಸಿದ ಕಾರ್ಯವು ತ್ವರಿತವಾಗುವಂತೆ ನೋಡಿಕೊಳ್ಳಲು ಗವ್ಹರ್ನರರು ಕಂಪಾಯ ಮಂಡಳದ ನಾಗರಿಕ ಪೂರೈಕೆ ಶಾಖೆಯನ್ನು ಆಹಾರ ಖಾತೆಯಿಂದು ಬೇರ್ಪಡಿಸಿರುವರು.

ಗವ್ಹರ್ನರರಾದ ಸರ್ ಆರ್ಥರ ಹೋಪರು ಅನಾರೋಗ್ಯದ ಮೂಲಕ ತಮ್ಮ ಅವಧಿ ಮುಗಿಯುವ ಮೊದಲೇ ತಮ್ಮ ಸ್ಥಳಕ್ಕೆ ರಾಜೀನಾಮೆ ಕೊಟ್ಟದ್ದರಿಂದ ಸಾರ್ವಭೌಮರು ಅದನ್ನು ಮಾನ್ಯಮಾಡಿ ಅವರ ಸ್ಥಳದಲ್ಲಿ ಸರ್ ಹೆನ್ರಿ ನಾಯಟರನ್ನು ತಾತ್ಪೂರ್ತಿಕ ಗವ್ಹರ್ನರರೆಂದು ನೇಮಿಸಿದ್ದು ತಾ. ೨೬ಕ್ಕೆ ಅವರು ಅಧಿಕಾರ ವಹಿಸುವರು.

ಕೇರಳದಿಂದ ಮದ್ರಾಸ ಶಾಸನ ಸಭೆಗೆ ಕಾಂಗ್ರೆಸದಿಂದ ಆರ್. ರಾಘವ ಮೆನನ್, ಎಂ.ಪಿ. ಗೋವಿಂದ ಮೆನನ್, ಸಿ.ಕೆ. ಗೋವಿಂದ ನಾಯರ, ಎಂ.ಪಿ. ದಾಮೋದರನ್, ಶ್ರೀಮತಿ ಎ.ವಿ. ಕುಟ್ಟಿಮಾಲು ಅಮ್ಮಾ, ಎಲ್.ಸಿ. ಪಾಯಸ ಮೊದಲಾದವರು ನಿಲ್ಲಿಸಲ್ಪಟ್ಟಿರುವರು.

## ಸಂಯುಕ್ತಪ್ರಾಂತ

ಅಬ್ದುಲ್ ರಶೀದ ದಿನಾಚರಣೆ ನಿಮಿತ್ತ ತಾ॥ ೧೭ ನೇ ದಿನ ಆಗ್ರಾದಲ್ಲಿ ಹರತಾಳ ಮೆರವಣಿಗೆ ಸಭೆ ಜರುಗಿ ಅವರ ಬಿಡುಗಡೆ ಮಾಡಬೇಕೆಂದು ಕೇಳಲಾಯಿತು. ಎಲ್ಲ ಪಕ್ಷದವರೂ ಭಾಗವಹಿಸಿದ್ದರು.

ಅಖಿಲ ಭಾರತ ವೃತ್ತಪತ್ರ ಸಂಪಾದಕರ ಪರಿಷತ್ತು ಅಲಹಾಬಾದದಲ್ಲಿ ತುಷಾರಿಕಾಂತಿ ಘೋಷರ ಅಧ್ಯಕ್ಷತೆಯಲ್ಲಿ ನಾಂಗವಾಯಿತು. ಸರ್ ತೇಜಬಹದ್ದೂರ ಸಪ್ರುರವರು ಮುದ್ರಣ ಕಾಯದೆಗಳ ವಿಷಯಕ್ಕೆ ಭಾಷಣ ಮಾಡಿದರು. ಹಿಂದುಸ್ತಾನ ಸರಕಾರದ ಆಹಾರ ಖಾತೆಯ ಬಿ ಆರ್ ಸೇನರು ಆಹಾರ ಪರಿಸ್ಥಿತಿ ತಿಳಿಸಿ ಸರಕಾರವು ಕೈಕೊಳ್ಳುವ ಯೋಜನೆಯಲ್ಲಿ ಸಹಕಾರ ಕೋರಿದರು.

ಎಂಪಾಯರ ಪ್ರೆಸ್ ಯೂನಿಯನದ ಹಿಂದೀ ಶಾಖೆಯ ಸಭೆಯು ಅಲಹಾಬಾದದಲ್ಲಿ ಸೇರಿ ಲಂಡನದಲ್ಲಿ ಜೂನದಲ್ಲಿ ಜರಗುವ ಪರಿಷತ್ತಿಗೆ ಸರ್ ಫ್ರಾನ್ಸಿಸ ಲೋ, ತುಷಾರಕಾಂತಿ ಘೋಷ, ಕಸ್ತೂರಿ ಶ್ರೀನಿವಾಸನ್. ಬ್ರೆಳವಿ, ಸಿ. ಆರ್. ಶ್ರೀನಿವಾಸನ್ ಅವರನ್ನು ಪ್ರತಿನಿಧಿಗಳನ್ನಾಗಿ ಆರಿಸಿತು.

ಜಯಪ್ರಕಾಶ ನಾರಾಯಣರ ಪತ್ನಿಯವರಾದ ಪ್ರಭಾವತಿದೇವಿಯವರು ಆಗ್ರಾ ತುರಂಗದಲ್ಲಿ ಅವರ ಭೆಟ್ಟಿ ತೆಗೆದುಕೊಂಡು, ಅಲ್ಲಿಂದ ಮಹಾತ್ಮರ ಭೆಟ್ಟಿಗಾಗಿ ಪುಣೆಗೆ ಹಿಂತಿರುಗಿದ್ದು ಜಯಪ್ರಕಾಶ ಹಾಗು ಡಾ. ಲೋಹಿಯಾ ಅವರ ಬಿಡುಗಡೆ ಮಾರ್ಚದಲ್ಲಾಗುವವೆಂದು ಅವರು ಹೇಳಿದರು.

## ಮಧ್ಯಪ್ರಾಂತ

ಕಾಂಗ್ರೆಸ ಕೇಂದ್ರ ಚುನಾವಣೆ ಮಂಡಲದವರು ನಾಗಪುರ ಪ್ರಾಂತದಿಂದ ಮಧ್ಯಪ್ರಾಂತ ಶಾಸನ ಸಭೆಗೆ ಶ್ರೀಯುತರಾದ ಧರ್ಮಾಧಿಕಾರಿ, ವಿಮಲಾಬಾಯಿ ದೇಶಪಾಂಡೆ, ಡಾ. ಬಾರಲಿಂಗೆ, ಸತ್ಯನಾರಾಯಣ ಬಜಾಜ, ಗೋಪಾಳರಾವ ಕಾಳೆ, ಮೊಹಿಬುಲ್ ಹಸನ (ವಿಶ್ವವಿದ್ಯಾಲಯ), ಅಬ್ದುಲಭಾಯಿ ತಾಹೇರ ಅಲ್ಲಿ (ವಾಣಿಜ್ಯ), ಮಹಫಜುಲ ಕಬೀರ ಸಿದ್ದೀಕಿ (ವರ್ಧಾ-ಚಂದಾ) ಮೊದಲಾದವರನ್ನು ನಿಲ್ಲಿಸಿದ್ದಾರೆ.

ಅ. ಭಾ. ಗ್ರಾಮೋದ್ಯೋಗ ಸಂಘದ ಸಭೆ ತಾ. ೧೬ ನೇ ದಿನ ಕೂಡಿದಾಗ ದೇಶದಲ್ಲಿಯ ಆಹಾರ ಪರಿಸ್ಥಿತಿ ಚರ್ಚಿಸಲ್ಪಟ್ಟು ಪಾಲಿಶ ಆಗದ ಅಕ್ಕಿ ಹಾಗು ಕೈಯಿಂದ ಬೀಸಿದ ಹಿಟ್ಟಿನ ಪ್ರಸಾರ ಹೆಚ್ಚಿಸಬೇಕು, ಆಹಾರ ಪದಾರ್ಥಗಳ ಉತ್ಪಾದನೆ ಬೆಳೆಸಬೇಕು ಮುಂತಾಗಿ ನಿರ್ಣಯವಾಯಿತು.

## ದಿಲ್ಲಿ-ಪಂಜಾಬ-ಸರಹದ್ದ

ಮುಂದಿನ ತಿಂಗಳಲ್ಲಿ ಆಸ್ಟ್ರೇಲಿಯಾದಿಂದ ಹಿಂದುಸ್ತಾನಕ್ಕೆ ೧೩ ಲಕ್ಷ ಟನ್ ಗೋದಿ ಬರಬಹುದೆಂದು ತಿಳಿಯುತ್ತದೆ.

ಬಹದ್ದೂರಗಡ ಶಿಬಿರದಿಂದ ೫೦ ಹಿಂ. ರಾ. ಸೈನಿಕರು ಬಿಡಲ್ಪಟ್ಟಿದ್ದಾರೆ.

ಪಂಜಾಬ ಶಾಸನ ಸಭೆ ಚುನಾವಣೆಯಲ್ಲಿ ಲುಧಿಯಾನಾ ಜಿಲ್ಹೆಯ ಮೂರೂ ಸೀಖ ಸ್ಥಳಗಳು ಕಾಂಗ್ರೆಸ್ಸಿಗೆ ಸಿಕ್ಕಿವೆ. ಅಕಾಲಿ ಉಮೇದವಾರರು ಪರಾಭವ ಹೊಂದಿ ಇಡುಗಂಟು ಕಳೆದುಕೊಂಡರು.

ಪ್ರಕೃತಿ ಸ್ವಲ್ಪ ಸುಧಾರಿಸಿದಲ್ಲಿ ಕಾಂಗ್ರೆಸ ಅಧ್ಯಕ್ಷರು ವ್ಹಾಯಿಸರಾಯರನ್ನು ಕಂಡು ಆಹಾರ ಪರಿಸ್ಥಿತಿ ಚರ್ಚಿಸಲಿರುವರು. ಅಸಫಅಲ್ಲಿಯವರು ಈಗಾಗಲೇ ಅಝಾದರ ಪರವಾಗಿ ಅವರನ್ನು ಕಂಡು ಅವರೊಡನೆ ಮಾತುಕತೆ ನಡಿಸಿ ಅದರ ಫಲಿತಾಂಶ ಅಝಾದರಿಗೆ ತಿಳಿಸಿದ್ದರು. ಅಝಾದರು ವ್ಹಾಯಿಸರಾಯರಿಗೆ ಪತ್ರ ಬರೆದು ಕೆಲವು ವಿಷಯಗಳ ಸ್ಪಷ್ಟೀಕರಣ ಕೇಳಿದ್ದಾರೆಂದು ತಿಳಿದು ಬರುತ್ತದೆ.

ಡಾ. ಗೋಪಿಚಂದ ಭಾರ್ಗವರು ಹರಿಜನದ ಉರ್ದು ಆವೃತ್ತಿ ಲಾಹೋರದಿಂದ ಹೊರಡಿಸಲಿರುವರು.

## ಸಿಂಧ

ದಾದು ಜಿಲ್ಹೆಯ ಜಮೀನ್ದಾರರಾದ ಅಲ್ಲನಖಾನ ಎಂಬವರಿಗೆ ಕೊಲೆ ಬಗ್ಗೆ ವಿಧಿಸಿದ ಗಲ್ಲಿನ ಶಿಕ್ಷೆಯನ್ನು ಸರಕಾರದವರು ಕರೆನೀರಿಗೆ ಇಳಿಸಿದ್ದರ ಸಂಬಂಧದಲ್ಲಿ ಕಾಂಗ್ರೆಸ್ಸಿನ ಆರ್ ಕೆ ಸಿಧ್ವಾರವರು ಅಸೆಂಬ್ಲಿಯಲ್ಲಿ ಮಂತ್ರಿಮಂಡಳದಲ್ಲಿ ಅವಿಶ್ವಾಸ ಪ್ರದರ್ಶನ ಸೂಚನೆ ತರಲಿದ್ದಾರೆ.

ಹಾಜಿ ಮೌಲಾಬಕ್ಷರವರು ಸಿನೇಟ ಸಭೆಗೆ ಮುಂಬಯಿಗೆ ಹೋದಾಗ ಸರದಾರ ವಲ್ಲಭಭಾಯಿಯವರನ್ನು ಕಂಡು ಸಿಂಧದ ರಾಜಕೀಯ ಪರಿಸ್ಥಿತಿ ಅವರಿಗೆ ತಿಳಿಸಿದರು.

ಹಿದಾಯತುಲ್ಲಾ ಮಂತ್ರಿಮಂಡಳದ ಕೆಲವರು ತಮ್ಮ ಮಂತ್ರಿಮಂಡಳ ಭದ್ರ ಮಾಡಿಕೊಳ್ಳಲು ವಿರುದ್ಧ ಪಕ್ಷದ ಸಯ್ಯದ ಮೊದಲಾದವರನ್ನು ಬಂಧಿಸುವ ವಿಚಾರ ನಡಿಸಿದ್ದಾರೆಂದು ಸುದ್ದಿಯಿದೆ ಆದರೆ ಹಿದಾಯತುಲ್ಲಾರವರು ಇದನ್ನು ನಿರಾಕರಿಸಿರುವರು.

## ಸಂಸ್ಥಾನಗಳು

ಕೊಚೀನ ಶಿಕ್ಷಣ ಖಾತೆ ಡಾಯರೆಕ್ಟರರು ಒಂದು ಹುಕುಮು ಹೊರಡಿಸಿ ಶಾಲೆಗಳಲ್ಲಿ ಧಾರ್ಮಿಕ ಪ್ರಾರ್ಥನೆ ನಡೆಸುವದಕ್ಕೆ ಅಡ್ಡಿ ಮಾಡಿದ್ದಾರೆ. ಕೆಲವು ಶಾಲೆಗಳಲ್ಲಿ ಕ್ರಿಶ್ಚಿಯನ ಪ್ರಾರ್ಥನೆ ನಡೆಯುತ್ತಿದ್ದವು.

ಕಾಠೇವಾಡದ ಚಿಕ್ಕ ಸಂಸ್ಥಾನಿಕರು ಸಂಯುಕ್ತೀಕರಣ ಯೋಜನೆ ಬಗ್ಗೆ ತಮ್ಮ ಅಭಿಪ್ರಾಯ ವ್ಯಕ್ತ ಮಾಡಲು ೧ ತಿಂಗಳ ಅವಧಿ ಕೇಳಿಕೊಂಡಿದ್ದಾರೆ.

## ಬಂಗಾಲ--ಆಸಾಮ

ಕಲಕತ್ತೆಯ ಗಲಭೆಯಲ್ಲಿ ಒಟ್ಟು ೪೩ ಜನರು ಸತ್ತಿದ್ದು ೨೧೫ ಜನರಿಗೆ ಗಾಯಗಳಾಗಿವೆ. ಬಂಧಿಸಿದವರಲ್ಲಿ ಕೆಲವರನ್ನು ಎಚ್ಚರಿಕೆ ಕೊಟ್ಟು ಬಿಟ್ಟಿದ್ದು ಕೆಲವರ ಕಡೆಯಿಂದ ಜಾಮೀನು ತೆಗೆದುಕೊಂಡಿರುವರು. ಮೌಲಾನಾ ಅಝಾದರು ಗಲಭೆ ಸಂಬಂಧದಲ್ಲಿ ಒಂದು ಪ್ರಕಟನೆ ಹೊರಡಿಸಿ ಪೋಲೀಸರು ಜಾಣತನದಿಂದ ವರ್ತಿಸಿದ್ದರೆ ಗಲಭೆ ಸಂಭವಿಸುತ್ತಿರಲಿಲ್ಲವೆಂದೂ ಮಿಲಿಟರಿಯವರನ್ನು ಕಳಿಸಿದ್ದುದು ಗಲಭೆ ಹೆಚ್ಚಲು ಕಾರಣವಾಯಿತೆಂದೂ ಉಲ್ಲೇಖಿಸಿದ್ದಾರೆ.

ಕಲಕತ್ತಾ ಕಾರ್ಪೊರೇಶನ್ ಸಭೆಯಲ್ಲಿ ಇತ್ತೀಚಿನ ಗೋಳೀಬಾರು ನಿಷೇಧಿಸಲ್ಪಟ್ಟು ಅದರ ನಿಷ್ಪಕ್ಷಪಾತ ವಿಚಾರಣೆಯಾಗಬೇಕೆಂದು ಬೇಡಲಾಯಿತು. ಗೋಳೀಬಾರಿನಲ್ಲಿ ಕಾರ್ಪೋರೇಶನದ ಡೆಪ್ಯೂಟಿ ಮೇಯರರಾದ ನಸಮುಲ ಹಕ್ಕರೂ ಮರಣ ಹೊಂದಿದರು.

ಬಂಗಾಲದ ಹೊಸ ಗವ್ಹರ್ನರರಾದ ಸರ್ ಫ್ರೆಡರಿಕ್ ಬರೋಜರು ತಾ. ೧೯ಕ್ಕೆ ಅಧಿಕಾರ ಸೂತ್ರ ವಹಿಸಿದರು.

ಡಾಕಾ ನಾರಾಯಣಗಂಜ ನಡುವೆ ತಾ. ೧೮ ನೇ ದಿನ ಜನಜಂಗುಳಿಯು ಎರಡು ಗಾಡಿಗಳ ಮೇಲೆ ದಾಳಿ ಮಾಡಿ ಪ್ರಯಾಣಿಕರನ್ನು ಇಳಿಸಿ ಅವುಗಳಿಗೆ ಬೆಂಕಿ ಹಚ್ಚಿತು. ಪೋಲೀಸರು ಬಂದು ಅವರನ್ನು ಚದುರಿಸಿದರು.

ಕಲಕತ್ತೆಯ ಗಲಭೆ ಭಾಗಗಳಲ್ಲಿ ನಿಲ್ಲಿಸಲಾಗಿದ್ದ ಮಿಲಿಟರಿ ಗಸ್ತಿಯವರನ್ನು ಈಗ ಹಿಂತೆಗೆದುಕೊಳ್ಳಲಾಗಿದೆ.

ಪ್ರೊ. ಜೆ. ಸಿ. ಘೋಷರು ಕಲಕತ್ತಾ ಪೂರ್ವ ಸಾಮಾನ್ಯ ಮತದಾರ ಸಂಘದಿಂದ ಬಂಗಾಲ ಶಾಸನ ಸಭೆಗೆ ಕಾಂಗ್ರೆಸ್ ಹುರಿಯಾಳಾಗಿ ಮೌಲಾನಾ ಅಝಾದರಿಂದ ನಿಲ್ಲಿಸಲ್ಪಟ್ಟಿರುವರು. ಅಶಕ್ತರಿರುವರೆಂದು ಮೊದಲು ಇವರನ್ನು ಬಿಡಲಾಗಿತ್ತು. ಆದರೆ ಡಾ ಬಿ.ಸಿ. ರಾಯರವರು ಅಷ್ಟೇನೂ ಅಶಕ್ತರಿಲ್ಲೆಂದು ಹೇಳಿದ್ದರಿಂದ ಮೊದಲು ನಿಲ್ಲಿಸಿದ ಕೇಶವಚಂದ್ರ ಚಕ್ರವರ್ತಿಯವರನ್ನು ಹಿಂತೆಗೆದುಕೊಳ್ಳಲಾಯಿತು.

ನಾರಾಯಣಗಂಜದ ೮೦೦೦ ಗಿರಣಿ ಕೂಲಿಕಾರರು ಹೆಚ್ಚಿನ ಕೂಲಿ ಬೇಡಿ ಸಂಪು ಹೂಡಿರುವರು.

ನೇತಾಜಿ ಚಿತ್ರಪಟಕ್ಕೆ ಅವಶ್ಯಕ ಅಪ್ಪಣೆ ತೆಗೆದುಕೊಳ್ಳಲು ವಿಜಯರತ್ನ ಮುಜುಮದಾರರು ದಿಲ್ಲಿಗೆ ಅಧಿಕಾರಿಗಳಲ್ಲಿ ಹೋಗಿರುವರು.

ಬಂಗಾಲ ಶಾಸನ ಸಭೆಗೆ ವಿಶ್ವವಿದ್ಯಾಲಯ ಸಂಘದಿಂದ ಡಾ. ಶ್ಯಾಮಪ್ರಸಾದ ಮುಕರ್ಜಿಯವರೂ ವಾಣಿಜ್ಯ ಸಂಘದಿಂದ ಕಾಂಗ್ರೆಸ್ಸಿನ ಡಿ. ಪಿ. [illegible]ನವರೂ ಇಲಾಖಾ ಜಮೀನದಾರ ಸಂಘದಿಂದ ಕಾಂಗ್ರೆಸ್ಸಿನ ಮಹಾರಾಜ ಶ್ರೀಶಚಂದ್ರ ನಂದಿಯವರೂ ಅವಿರೋಧ ಆರಿಸಿ ಬಂದಿರುವರು.

ಬ್ರಹ್ಮದೇಶದಲ್ಲಿ ಹಿಂ. ರಾ. ಸೈನ್ಯ ನಿಧಿಗೆ ಲಕ್ಷಗಟ್ಟಲೆ ಬೆಲೆಯುಳ್ಳ ಎಲ್ಲ ಬೆಳ್ಳಿ ಹಾಗು ಬಂಗಾರದ ಆಭರಣಗಳನ್ನೂ ಮುತ್ತು ರತ್ನಗಳನ್ನೂ ಹಾಗೂ ರೋಖ ೫೧ ಸಾವಿರ ರೂಪಾಯಿಗಳನ್ನೂ ದಾನ ಮಾಡಿದ ಶ್ರೀಮತಿ ಹಿರಾಬಾಯಿ ಬೇಟಾಯಿ ಅವರು ಕಲಕತ್ತೆಗೆ ಬಂದಿರುವರು. ಇನ್ನು ಅವರು ಕಲಕತ್ತೆಯಲ್ಲಿಯೇ ಇದ್ದು ಚಳವಳಿ ಕಾರ್ಯ ಸಾಗಿಸುವರು.

೧೯೪೨ ರ ಚಳವಳಿಯಲ್ಲಿ ನಾಮಪಾರ್ಥ ರೇಲ್ವೆ ಅಪಘಾತ ಖಟ್ಲೆಯಲ್ಲಿ ೧೦ ವರ್ಷ ಶಿಕ್ಷೆಗೆ ಗುರಿಯಾದ ಆಸಾಮದ ೫ ರಾಜಕೀಯ ಕೈದಿಗಳನ್ನೊಳಗೊಂಡು ಎಲ್ಲ ಕೈದಿಗಳನ್ನು ಕಾಂಗ್ರೆಸ ಮಂತ್ರಿಮಂಡಲದವರು ಬಿಡುಗಡೆ ಮಾಡಿದ್ದಲ್ಲದೆ ಕಾಂಗ್ರೆಸ್ಸಿಗರ ಮೇಲೆ ಹೇರಲಾಗಿದ್ದ ಎಲ್ಲ ಪ್ರತಿಬಂಧಕಾಜ್ಞೆಗಳನ್ನೂ ಹಿಂತೆಗೆದುಕೊಂಡಿರುವರು.

ಆಸಾಮದಲ್ಲಿ ಈ ವರ್ಷ ೧ ಲಕ್ಷ ೩೦ ಸಾವಿರ ಜನರು ಕಾಂಗ್ರೆಸ ಸದಸ್ಯರಾಗಿರುವರು.

# ಭಾರತ ಮಂತ್ರಿಗಳು ಹಿಂದುಸ್ತಾನಕ್ಕೆ ಬರುವರು

## ಘಟನಾ ಸಮಿತಿಯ ವಿಷಯದಲ್ಲಿ ಚರ್ಚೆ ನಡೆಸಲು ಸರ್ ಸ್ಟಾಫೋರ್ಡ ಕ್ರಿಪ್ಸರೂ ಬರುವರು — ಬಿಕ್ಕಟ್ಟು ಬಿಡಿಸಲು ಹೊಸ ಪ್ರಯತ್ನ

ಹಿಂದುಸ್ತಾನದ ಘಟನಾತ್ಮಕ ಬಿಕ್ಕಟ್ಟನ್ನು ಬಿಡಿಸಲು ಭಾರತಮಂತ್ರಿ ಲಾರ್ಡ ಪೆಥಿಕ್ ಲಾರೆನ್ಸ ವಾಣಿಜ್ಯಮಂತ್ರಿ ಸರ್ ಸ್ಟಾಫರ್ಡ ಕ್ರಿಪ್ಸ್ ಮತ್ತು ನೌಕಾಮಂತ್ರಿ ಅಲೆಕ್ಝಾಂಡರ್ ಇವರನ್ನು ಹಿಂದುಸ್ತಾನಕ್ಕೆ ಕಳಿಸಲು ಬ್ರಿಟಿಶ ಸರಕಾರವು ನಿರ್ಧರಿಸಿದೆಯೆಂದು ಭಾರತ ಮಂತ್ರಿಗಳು ಲಾರ್ಡ್ಸ ಸಭೆಯಲ್ಲಿ ಕಳೆದ ಮಂಗಳವಾರ ಘೋಷಿಸಿದರು. ಬ್ರಿಟಿಶ್ ಪ್ರಧಾನಮಂತ್ರಿ ಆ್ಯಟ್ಲಿಯವರು ಪಾರ್ಲಿಮೆಂಟಿನಲ್ಲಿ ಅದೇ ಆಶಯದ ಹೇಳಿಕೆಯನ್ನು ಕೊಟ್ಟರು. ಪ್ರಾಯಶಃ ಅವರು ಮಾರ್ಚ ತಿಂಗಳ ಉತ್ತರಾರ್ಧದಲ್ಲಿ ಹಿಂದುಸ್ತಾನಕ್ಕೆ ಆಗಮಿಸಬಹುದು.

### ಸಪ್ಟಂಬರ ಯೋಜನೆ

೧೯೪೫ ನೇ ಸಪ್ಟಂಬರ ೧೯ ನೇ ತಾರೀಖಿನ ದಿನ ವ್ಹಾಯಿಸರಾಯರಾದ ವೇವೆಲ್ಲರು ಮುಂದಿಟ್ಟ ಸೂಚನೆಗಳನ್ನು ಜಾರಿಗೆ ತರುವುದೇ ಸರಕಾರದ ಉದ್ದೇಶ. ೧) ರಾಜ್ಯಘಟನೆಯ ರಚನೆಗಾಗಿ ಆದಷ್ಟು ಹೆಚ್ಚು ಮತೈಕ್ಯ ಪಡೆಯುವುದಕ್ಕಾಗಿ ಹಿಂದುಸ್ತಾನದ ಜನಪ್ರತಿನಿಧಿಗಳೊಡನೆ ಮತ್ತು ಸಂಸ್ಥಾನಗಳೊಡನೆ ಮಾತುಕತೆ, ೨) ಘಟನಾ ಸಮಿತಿಯ ನೇಮಕ ಮತ್ತು ೩) ಹಿಂದುಸ್ತಾನದ ಪ್ರಮುಖ ಪಕ್ಷಗಳ ಬೆಂಬಲವಿದ್ದ ಕಾರ್ಯಕಾರಿ ಮಂಡಳದ ರಚನೆ-ಈ ಕಾರ್ಯಕ್ರಮಗಳನ್ನು ಕೇಂದ್ರ ಮತ್ತು ಪ್ರಾಂತಿಕ ಶಾಸನ ಸಭೆಗಳ ಚುನಾವಣೆಯು ಮುಗಿದ ಮೇಲೆ ಕೈಕೊಳ್ಳಲಾಗುವುದೆಂದು ವೇವೆಲ್ಲರು ನುಡಿದಿದ್ದರು. ಕೇಂದ್ರ ಶಾಸನ ಸಭೆಯ ಚುನಾವಣೆಯು ಮುಗಿದು ಪ್ರಾಂತಿಕ ಚುನಾವಣೆಗಳೂ ಮುಗಿಯಲು ಬಂದಿರುವುದರಿಂದ ಕ್ರಿಯಾತತ್ಪರರಾಗಲು ಈ ಶಿಷ್ಟಮಂಡಳವನ್ನು ಕಳಿಸಲು ನಿರ್ಧರಿಸಲಾಗಿದೆಯಂತೆ.

### ಶಿಷ್ಟಮಂಡಳದ ಅಧಿಕಾರ

ಈ ಶಿಷ್ಟಮಂಡಳವು ಬ್ರಿಟಿಶ ಸರಕಾರದ ಪ್ರತಿನಿಧಿಯಾಗಿ ಹಿಂದುಸ್ತಾನದಲ್ಲಿ ಕೆಲಸ ಮಾಡುವುದೆಂದು ಭಾರತಮಂತ್ರಿ ಪೆಥಿಕ್ ಲಾರೆನ್ಸರೇ ಪಾರ್ಲಿಮೆಂಟಿನಲ್ಲಿ ಮರುದಿನ ನುಡಿದರು. ಬ್ರಿಟಿಶ್ ಸರ[illegible] ಮಂಡಳದಿಂದ ಅದು ಸಾಕಷ್ಟು ಅಧಿಕಾರ [illegible]ಡೆದಿರುವುದು. “ಸ್ವಲ್ಪಮಟ್ಟಿಗಾದರೂ [illegible]ತಂತ್ರ್ಯ ಕೊಡದೆ ಬ್ರಿಟಿಶ ಮಂತ್ರಿಗಳನ್ನು ಕಳಿಸುವುದು ನಿರುಪಯುಕ್ತ. ಮಹತ್ವದ ವಿಷಯಗಳಲ್ಲಿ ಬ್ರಿಟಿಶ ಸರಕಾರದ ಸಲಹೆ ಕೇಳಿಕೊಳ್ಳುವರು. ವಿಚಾರವಿನಿಮಯಕ್ಕಾಗಿ ಹೊರಟಿರುವ ಅವರಿಗೆ ಅಧಿಕಾರವಿರಲೇಬೇಕು” ಎಂದು ಆ್ಯಟ್ಲಿಯವರು ಪಾರ್ಲಿಮೆಂಟಿನಲ್ಲಿ ಈಡನ್ನರ ಆಣಕು ಮಾತುಗಳಿಗೆ ಉತ್ತರವಿತ್ತಿದ್ದಾರೆ. ಆದರೆ, ವ್ಹಾಯಿಸರಾಯರ ಅಭಿಪ್ರಾಯವನ್ನು ಶಿಷ್ಟಮಂಡಳವು ಮೀರಲಾರದು. ವೇವೆಲ್ಲರೊಡನೆ ಕೂಡಿಕೊಂಡು ಹೋಗುವೆವೆಂದು ಪೆಥಿಕ್ ಲಾರೆನ್ಸರು ಹೇಳಿದರು. ಶಿಷ್ಟಮಂಡಳವು ಇಂತಿಷ್ಟು ಸಮಯದವರೆಗೆ ಹಿಂದುಸ್ತಾನದಲ್ಲಿರಬೇಕೆಂಬ ಸಮಯಾವಧಿಯನ್ನು ಗೊತ್ತುಪಡಿಸಿಲ್ಲ. ಅವಶ್ಯವಿದ್ದುದಕ್ಕಿಂತ ಅಧಿಕ ದಿನ ಉಳಿಯದೇ ಇದ್ದರೂ ಕೆಲಸವನ್ನು ಅರ್ಧದಲ್ಲೇ ಬಿಟ್ಟು ಹಿಂತೆರಳಲಾರದು.

### ಅಧಿಕಾರ ಬಿಟ್ಟುಕೊಡುವ ಇಚ್ಛೆ

ಅಧಿಕಾರವನ್ನು ಬಿಟ್ಟುಕೊಡಲು ಅಥವಾ ಬಿಟ್ಟುಕೊಡುವದಕ್ಕಾಗಿ ಮಾತುಕತೆ ನಡೆಸಲು ಶಿಷ್ಟಮಂಡಳವು ತೆರಳುತ್ತಿದೆಯೆ?ಎಂದುಪತ್ರಿಕೋದ್ಯಮಿಗಳ ಸಭೆಯಲ್ಲಿ ಕೆಲವರು ಭಾರತಮಂತ್ರಿಗಳನ್ನು ಕೇಳಲು, “ಅಧಿಕಾರವನ್ನು ಬಿಟ್ಟುಕೊಡುವ ಸೂಚನೆಯನ್ನು ಈ ಮೊದಲೇ ತಿಳಿಸಲಾಗಿದೆ. ಅಧಿಕಾರ ಬಿಟ್ಟುಕೊಡುವದು ಸರಕಾರದ ಇಚ್ಛೆ. ಅದನ್ನು ಪದೇ ಪದೇ ಹೇಳಿರುವೆವು. ಅದನ್ನು ಸಾಧಿಸಲು ಒಂದು ಘಟನೆಯನ್ನು ರಚಿಸಬೇಕು ಆ ಘಟನೆಯ ತಳಹದಿಯನ್ನು ನಿರ್ಮಿಸಲು ಯೋಗ್ಯ ಹಿಂದೀಯರನ್ನು ಕಾಣುವದೇ ಶಿಷ್ಟಮಂಡಳದ ಉದ್ದೇಶ” ವೆಂದರು. ಘಟನಾ ಸಮಿತಿಗೆ ಅಧಿಕಾರ ಬಿಟ್ಟುಕೊಡಲಾಗುವದೇ ಎಂದು ಕೇಳಲು ಘಟನಾ ಸಮಿತಿಯು ಸೂಚಿಸುವ ಘಟನಾತ್ಮಕ ಅಧಿಕಾರಿ ಮಂಡಲಕ್ಕೆ ಬಿಟ್ಟುಕೊಡಲಾಗುವದು, ಎಂದುತ್ತರ ದೊರೆಯಿತು.

### ಕ್ರಿಪ್ಸ ಯೋಜನೆಗಿಂತ ಭಿನ್ನ

ಸರಕಾರೀ ಶಿಷ್ಟಮಂಡಲವು ನಿಶ್ಚಿತದಾದ ಯೋಜನೆಯೊಂದಿಗೆ ಹೊರಟುಬರುವಂತೆ ಕಾಣುವದಿಲ್ಲ. ಮುಖಂಡರೊಡನೆ ಮಾತುಕತೆ ನಡೆಸಿ ಅವರು ಮುಂದಿನ ಆಲೋಚನೆ ನಡೆಸುವರು. ಆದರೆ ಕ್ರಿಪ್ಸಯೋಜನೆಯು ಮೃತ್ಯುಛಾಯೆಯಿದ್ದೇ ಇದೆ. ಕ್ರಿಪ್ಸ ರಾಯಭಾರಕ್ಕೂ ಈ ರಾಯಭಾರಕ್ಕೂ ಭೇದವೇನೆಂದು ಪತ್ರಿಕೋದ್ಯಮಿಗಳು ಪ್ರಶ್ನಿಸಿದಾಗ ಆ ಹೂರಣ ಹೊರಬಿತ್ತು. “ಕ್ರಿಪ್ಸರು ನಿಶ್ಚಿತವಾದ ಒಂದು ಯೋಜನೆಯನ್ನೊಯ್ದಿದ್ದರು. ಅದರ ಮೂಲ ಮುಖ್ಯ ವಿಷಯಗಳಲ್ಲಿ ಬದಲಾವಣೆ ಮಾಡಲು ಅವರಿಗೆ ಅಧಿಕಾರವಿದ್ದಿಲ್ಲ. ಆದರೆ, ವ್ಹಾಯಿಸರಾಯರ ಸಪ್ಟಂಬರ ಘೋಷಣೆಯು ಅದಕ್ಕಿಂತ ವ್ಯಾಪಕವಾದುದು. ಕ್ರಿಪ್ಸ ಯೋಜನ ಅಥವಾ ತಿದ್ದುಪಡಿ ಮಾಡಿದ ಸೂಚನೆಗಳು ಇವುಗಳಲ್ಲಿ ಯಾವುದನ್ನು ಜಾರಿಗೆ ತರಬೇಕೆಂಬ ಬಗ್ಗೆ ವ್ಹಾಯಿಸರಾಯರು ಪ್ರಾಂತಿಕ ಹಾಗೂ ಇನ್ನಿತರ ಹಿಂದೀ ಮುಖಂಡರೊಡನೆ ವಿಚಾರ ವಿನಿಮಯ ಮಾಡುವರು” ಎಂದು ಪೆಥಿಕ್ ಲಾರೆನ್ಸರು ಉತ್ತರವಿತ್ತರು.

### ಪಾಕಿಸ್ತಾನದ ಪ್ರಶ್ನೆ

ಪಾಕಿಸ್ತಾನದ ಬಗ್ಗೆ ಅವರು ತಮ್ಮ ಅಭಿಪ್ರಾಯವನ್ನು ತಿಳಿಸಲು ನಿರಾಕರಿಸಿದರು. ಹಿಂದುಸ್ತಾನಕ್ಕೆ ನಾವು ತೆರಳಿದ ಮೇಲೆ ಚರ್ಚಿಸುವ ವಿಷಯಗಳಲ್ಲಿ ಅದೂ ಒಂದು, ಎಂದು ಪೆಥಿಕ್ ಲಾರೆನ್ಸರು ಪತ್ರಿಕೋದ್ಯಮಿಗಳ ಸಭೆಯಲ್ಲಿ ಹೇಳಿದರು. ಯಾವುದಾದರೊಂದು ಪಕ್ಷವು ಸಹಕರಿಸದೇ ಇದ್ದರೆ ಏನು ಮಾಡುವಿರಿ ಎಂದು ಕೇಳಲು ಕೆಲಸವು ಯಶಸ್ವಿಯಾಗುವುದೆಂದು ತಮ್ಮಲ್ಲಿ ವಿಶ್ವಾಸವಿದೆಯೆಂದರು. ಹಿಂದುಸ್ತಾನದೊಡನೆ ಒಪ್ಪಂದ ಮಾಡಿಕೊಳ್ಳಲು ಬ್ರಿಟನ ಬಯಸುತ್ತಿದೆಯೆಂದೂ ಅವರು ಉದ್ಗರಿಸಿದರು.

### ಅಝ್ಹುದರ ಮತ

“ಬ್ರಿಟಿಶ ಮಂತ್ರಿಗಳು ಹಿಂದುಸ್ತಾನವನ್ನು ಸಂದರ್ಶಿಸಬೇಕೆಂದು ನಿರ್ಧರಿಸಿದುದು ಜಾಣತನದ್ದು. ಹಿಂದುಸ್ತಾನ ಇದನ್ನು ಸ್ವಾಗತಿಸುವುದು” ಎಂದು ಮೌ. ಅಝ್ಹುದರು ಸಂತೋಷವ್ಯಕ್ತಪಡಿಸಿದರು. ಬ್ರಿಟಿಶ ಮಂತ್ರಿಗಳ ಆಗಮನದಿಂದ ಹಿಂದುಸ್ತಾನದ ಹಿತ ಸಂಭವಿಸುವದೆಂದು ಆಶಿಸುವೆ, ೧೯೪೨ರ ಎಪ್ರೀಲ ಅಥವಾ ಸಿಮ್ಲಾ ಪರಿಷತ್ತಿನ ಇತಿಹಾಸದ ಪುನರಾವೃತ್ತಿ ಆಗದಿರಲಿ. ಜಗತ್ತಿನ ಸ್ವತಂತ್ರ ರಾಷ್ಟ್ರಗಳ ಮಾಲಿಕೆಯಲ್ಲಿ ಹಿಂದುಸ್ತಾನವು ಸೇರುವ ಸುಸಂಧಿಯನ್ನು ಬೇಗನೆ ಪಡೆಯಲಿ” ಎಂದು ಅಸಫಅಲ್ಲಿಯವರು ಅಭಿಪ್ರಾಯಪಟ್ಟರು.

### ಬ್ರಿಟಿಶರ ಪ್ರತಿಕ್ರಿಯೆ

“ಇಷ್ಟು ಅಧಿಕಾರ ಪಡೆದು ತೆರಳುವ ಶಿಷ್ಟಮಂಡಳ ನಮ್ಮ ಇತಿಹಾಸದಲ್ಲೇ ಇಲ್ಲ. ಇದು ಧೈರ್ಯದ ಹೆಜ್ಜೆ. ಅದು ಫಲಪ್ರದವಾದರೆ ಸರಕಾರಕ್ಕೆ ಕೀರ್ತಿ” ಎಂದು ಹೆಂಡರ್ಸನ್ ಸ್ಟಿವರ್ಟ (ಲಿಬರಲ್) ರವರು ನುಡಿದರು. ಸರಕಾರವು ಹಿಂದುಸ್ತಾನದ ಬಗೆ ಗಂಭೀರವಾಗಿ ಆಲೋಚಿಸುತ್ತಿದೆಯೆಂಬುದಕ್ಕೆ ಈ ಶಿಷ್ಟಮಂಡಳವೇ ನಿದರ್ಶನವೆಂದು ಲಾರ್ಡ ಫಾರಿಂಗ್ಟನ (ಕಾ.) ಇವರು ಹೇಳಿದರು. ಸ್ವತಂತ್ರ ಹಿಂದುಸ್ತಾನವನ್ನು ಕಾಣಲು ಈ ಸರಕಾರ ಬಯಸುತ್ತಿದೆಯೆಂದು ಹಿಂದೀಯರಿಗೆ ಖಚಿತವಾಗಲಿಯೆಂದು ಮೈಕೆಲ್ ಫೂಟರು ಉದ್ಗರಿಸಿದರು. ಹಿಂದುಸ್ತಾನದ ಸಮಸ್ಯೆಯನ್ನು ಶಾಂತಿ ರೀತಿಯಿಂದ ಬಗೆಹರಿಸುವಂತಾಗಲಿಯೆಂದು ಕೋವೆಯವರ ಹಾರೈಕೆ. ದೇಶದ ಆಡಳಿತೆ ನಡೆಸಲು ಹಿಂದೀಯರು ಅಸಮರ್ಥರು. ಅದಕ್ಕೆ ಅವಕಾಶ ಕೊಟ್ಟರೆ ಅದರಿಂದ ಯಾದವೀ ಯುದ್ಧ ನಿಶ್ಚಯವೆಂದು ಸರ್ ಆಲ್ಫ್ರೆಡ್ ನಾಕ್ಸರವರು (ಕಾನ್ಸ) ಅಭಿಪ್ರಾಯ ಪಟ್ಟರು. ಅಧಿಕಾರವನ್ನು ಬಿಟ್ಟುಕೊಡುವ ನಿರ್ಧಾರಕ್ಕೆ ಬಂದೇ ಶಿಷ್ಟಮಂಡಳವು ಹೊರಡಲಿಯೆಂಬುದಾಗಿ ಹಿಂದೀ ಕಾಂಗ್ರೆಸ್ಸಿಗರ (ಲಂಡನ) ಅಧ್ಯಕ್ಷರಾದ ಪಿ.ಬಿ. ಸೀಲ್‌ರವರು ಸೂಚಿಸಿದರು.

### ಗವ್ಹರ್ನರರ ರಾಜೀನಾಮೆ

ಇತ್ತ ಪ್ರಾಂತಗಳಲ್ಲಿ ಪುನಃ ಕಾಂಗ್ರೆಸ ಮಂತ್ರಿಮಂಡಲಗಳನ್ನು ರಚಿಸುವ ಯತ್ನ ನಡೆದಿದೆ, ಅಸಾಮದಲ್ಲಿ ಚುನಾವಣೆಯು ಮುಗಿದು ಕಾಂಗ್ರೆಸ್ಸಿಗೆ ಪ್ರಚಂಡ ಬಹುಮತ ದೊರೆತಿರುವದರಿಂದ ಆ ಪ್ರಾಂತದಲ್ಲಿ ಈಗಾಗಲೇ ಕಾಂಗ್ರೆಸ್ಸು ಅಧಿಕಾರ ಸ್ವೀಕರಿಸಿದೆ. ಕಾಂಗ್ರೆಸ ಮಂತ್ರಿಮಂಡಳಗಳನ್ನು ರಚಿಸಿದ ಪ್ರಾಂತಗಳಲ್ಲಿ ಗವ್ಹರ್ನರರು ಕೈಹಾಕಿದರೆ ಕಾಂಗ್ರೆಸದ ಧೋರಣವೇನೆಂದು ರಾಷ್ಟ್ರಪತಿಗಳನ್ನು ಪ್ರಶ್ನಿಸಲು “ಮಂತ್ರಿಗಳು ಮತ್ತು ಗವ್ಹರ್ನರರಲ್ಲಿ ಮತಭೇದವಾದಾಗ ಗವ್ಹರ್ನರರೇ ರಾಜೀನಾಮೆ ಕೊಡಬೇಕಾಗುವದು” ಎಂದರು. ಹೀಗಿರುವಾಗ ೧೯೩೭ ರಂತೆ ಆಶ್ವಾಸನ ಪಡೆಯುವ ಪ್ರಶ್ನೆಯೆ ಇಲ್ಲ.

### ಆಹಾರ ಬಿಕ್ಕಟ್ಟು

ರಾಜಕೀಯ ಸಮಸ್ಯೆಯನ್ನು ತೀರ್ಮಾನಿಸಲು ಅತ್ತ ಯತ್ನ ನಡೆದಾಗ ಇತ್ತ ದೇಶದಲ್ಲಿ ಬರಗಾಲ ಪರಿಸ್ಥಿತಿಯೇ ತಲೆಯೆತ್ತಿದೆ. ಅಹಾರ ವಸ್ತುಗಳ ಕೊರತೆ ಭೀಕರವಾಗಿದೆ. ಈ ಕೊರತೆಯನ್ನು ನೀಗಿಸಲು ಬ್ರಿಟಿಶ ಹಿಂದುಸ್ತಾನದಲ್ಲೆಲ್ಲ ಸೀದಾ ಪ್ರಮಾಣವನ್ನು ೪೦ ತೊಲೆಯಿಂದ ೩೦ ತೊಲೆಗೆ ಇಳಿಸಲಾಗುವದು. ದೈಹಿಕ ಶ್ರಮದ ಕೆಲಸ ಮಾಡುವವರಿಗೆ ೧೦ ತೊಲೆ ಹೆಚ್ಚು ಕೊಡಲಾಗುವದು ಎಂದು ವ್ಹಾಯಿಸರಾಯ ವೇವೆಲ್ಲರು ೧೬ನೇ ತಾರೀಕಿನ ದಿನ ರಾತ್ರಿ ೮-೩೦ ಕ್ಕೆ ಆಕಾಶವಾಣಿ ಮೂಲಕ ಭಾಷಣ ಮಾಡಿದರು. ಕಳೆದ ಅಕ್ಟೋಬರ ತಿಂಗಳಲ್ಲಿ ಬಿರುಗಾಳಿ ಬಂದುದರಿಂದ ಬೆಳೆ ಬರಲಿಲ್ಲ. ಆಹಾರ ವಸ್ತುಗಳನ್ನು ನಿರ್ಯಾತ ಮಾಡಿದ ಸುದ್ದಿ ಸುಳ್ಳು ಎಂದು ಹೇಳಿ ಅವರು ಅನಾವೃಷ್ಟಿಯ ಪರಿಣಾಮವನ್ನು ವಿವರಿಸಿ, ಒಟ್ಟು ಈ ವರುಷ ೩೦ ಲಕ್ಷ ಟನ್ ಆಹಾರ ವಸ್ತುಗಳ ಕೊರತೆಯುಂಟಾಗಿದೆಯೆಂದರು. ಈ ಸಂಕಟದಿಂದ ಪಾರಾಗಲು ಮಿತ ಆಹಾರ, ಆಹಾರ ವಸ್ತುಗಳ ಸಂಪಾದನೆ ಮುಂತಾದವುಗಳನ್ನು ಅವರು ಪ್ರತಿಪಾದಿಸಿ ಲಾಭಬಡಕರು, ಕಳ್ಳಪೇಟೆ ಮಾರಾಟಗಾರರು ಇವರ ಗಂಡಾಂತರ ಪರಿಹರಿಸಬೇಕೆಂದು ಎಚ್ಚರಿಸಿದರು. ಆಹಾರವು ರಾಜಕೀಯ ವಿಷಯವಲ್ಲವೆಂದು ತಿಳಿಸಿ ಪ್ರತಿಯೊಬ್ಬರೂ ಪ್ರಾಂತಿಕ ಮತ್ತು ಕೇಂದ್ರ ಸರಕಾರಗಳೊಡನೆ ಸಹಕರಿಸಬೇಕೆಂದೂ ಗಾಂಧೀಜಿ ಮತ್ತು ಜಿನ್ನಾರವರು ತೋರಿಸಿದ ಹಾದಿಯಲ್ಲಿ ತೆರಳೋಣವೆಂದರು.

### ಮಹಾತ್ಮರ ಸೂಚನೆ

ಕಾರಣವೇನೇ ಇರಲಿ ಸರಕಾರ ಮತ್ತು ಸಾರ್ವಜನಿಕರು ಸಹನೆಯಿಂದ ಮತ್ತು ಧೈರ್ಯದಿಂದ ಈ ಆಹಾರ ಬಿಕ್ಕಟ್ಟನ್ನು ಎದುರಿಸದೇ ಇದ್ದರೆ ವಿಪತ್ತು ನಿಶ್ಚಯ. ಇದೊಂದನ್ನು ಬಿಟ್ಟು ಉಳಿದೆಲ್ಲ ವಿಷಯಗಳಲ್ಲಿ ನಾವು ವಿದೇಶೀ ಸರಕಾರದ ವಿರುದ್ಧ ಹೋರಾಡಬೇಕು. ಆದರೆ ಈ ಆಹಾರ ವಿಷಯದಲ್ಲಿ ಕೂಡಾ ಸರಕಾರವು ನಿರ್ಲಜ್ಜತನದಿಂದ ವಂಚಿಸಿದರೆ ಅಥವಾ ನ್ಯಾಯವಾದ ಜನಾಭಿಪ್ರಾಯವನ್ನು ತಿರಸ್ಕರಿಸಿದರೆ ನಾವು ಅದರ ವಿರುದ್ಧ ಹೋರಾಡುವೆವು ಎಂದು ಮಹಾತ್ಮಾ ಗಾಂಧಿಯವರು ನುಡಿದರು. ಪ್ರತಿಯೊಬ್ಬರೂ ಜೀವನಾಧಾರಕ್ಕೆ ಕನಿಷ್ಠ ಅವಶ್ಯವಿದ್ದ ಆಹಾರ ವಸ್ತುಗಳನ್ನು ಸೇವಿಸಬೇಕು, ನಗರಗಳಲ್ಲಿದ್ದವರು ಆದಷ್ಟು ಕಾಯಿಪಲ್ಲೆಗಳನ್ನು ಉಪಯೋಗಿಸಬೇಕು ಹಾಗೂ ಅವುಗಳನ್ನು ಬೆಳೆಸಬೇಕು ಎಂದವರು ನುಡಿದು, ಸೈನಿಕರ ಆಹಾರ ವಸ್ತುಗಳಲ್ಲೂ ಕಡಿತ ಜಾರಿಗೆ ತರತಕ್ಕದ್ದು, ಎಣ್ಣೆ ಬೀಜಗಳ ನಿರ್ಯಾತವನ್ನು ನಿಲ್ಲಿಸಬೇಕು, ಎಂದು ಸೂಚಿಸಿರುವರು. ವ್ಹಾಯಿಸರಾಯರ ಗವ್ಹರ್ನರರ ಹಾಗೂ ಇನ್ನಿತರರ ತೋಟಗಳಲ್ಲಿ ಕಾಯಿಪಲ್ಲೆಗಳನ್ನು ಬೆಳೆಸುವದವಶ್ಯವೆಂದೂ ಅಭಿಪ್ರಾಯ ಪಟ್ಟಿದ್ದಾರೆ.

### ನೆಹರುರವರ ಎಚ್ಚರಿಕೆ

“ಈಸಲ ದೇಶದಲ್ಲಿ ಲಕ್ಷಗಟ್ಟಲೆ ಜನ ಉಪವಾಸದಿಂದ ಬಲಿಯಾದರೆ ಸಹಿಸಲಾರೆವು. ಬರಗಾಲದಿಂದ ಜನ ಮರಣ ಹೊಂದಿದರೆ ಮುಯ್ಯ ತೀರಿಸಿಕೊಳ್ಳಲಾಗುವುದು” ಎಂದು ಪಂಡಿತ ನೆಹರುರವರು ಎಚ್ಚರಿಕೆಯನ್ನು ಕೊಟ್ಟಿದ್ದಾರೆ. ಬಂಗಾಲದ ಬರಗಾಲವನ್ನು ಅವರು ಉಲ್ಲೇಖಿಸಿದಾಗ ಈಗಿನ ಆಹಾರ ಪರಿಸ್ಥಿತಿಯನ್ನು ವಿವೇಚಿಸಿದರು. “ಬಂಗಾಲದಲ್ಲಿ ಜನ ಹೊಟ್ಟೆಗಿಲ್ಲದೆ ಬಳಲಿರಸ್ತೆಗಳಲ್ಲಿ ಬಿದ್ದು ಸಾಯುತ್ತಿದ್ದಾಗ ಬ್ರಿಟಿಶ ಜನರು ಮತ್ತು ಕೆಲವು ಹಿಂದೀಯರು ದೊಡ್ಡ ದೊಡ್ಡ ಹಾಟೇಲುಗಳಲ್ಲಿ ಹಬ್ಬ ಮಾಡಿ ಕುಣಿಯುತ್ತಿದ್ದರು. ಕಾಳುಕಡಿಗಳ ಪೂರೈಕೆಗೆ ರೇಲ್ವೆ ವಾಗೀನುಗಳಿರಲಿಲ್ಲ! ಆದರೆ ಕಲಕತ್ತಾಕ್ಕೆ ಪಂದ್ಯಾಟದ ಕುದುರೆಗಳನ್ನು ಕಳಿಸಲು ವಾಗೀನುಗಳು ದೊರೆಯುತಿದ್ದುವು” ಎಂದವರು ಆಣಕವಾಡುಗಳನ್ನಾಡಿದ್ದಾರೆ.

---

## ಮಂಗಳೂರಲ್ಲಿ ಕೃಪಲಾಣಿಯವರು

### “ಬೇಟೆ ನಾಯಿಗಳಾಗಬೇಡಿರಿ, ಸಿಂಹಗಳಾಗಿರಿ!”

ಇದೇ ತಾ|| ೧೨ ಕ್ಕೆ ದಕ್ಷಿಣ ಕನ್ನಡ ಜಿಲ್ಲೆಗೆ ಕಾಂಗ್ರೆಸ್ ಪ್ರಚಾರಾರ್ಥ ಆಗಮಿಸಿದ ಅ. ಭಾ. ಕಾಂಗ್ರೆಸ್ ಮಹಾಕಾರ್ಯದರ್ಶಿ ಆಚಾರ್ಯ ಜೆ. ಬಿ. ಕೃಪಲಾನಿಯವರಿಗೆ ನಾಲ್ಕು ದಿನಗಳ ಉಸಿರುಬಿಡಲಾರದ ಕಾರ್ಯಕ್ರಮಗಳಿದ್ದವು. ಮಂಗಳೂರಿನ ನಿಸರ್ಗ ಮನೋಹರತೆಯಿಂದ ಅವರು ಮುಗ್ಧರಾಗಿ ಹೋಗಿದ್ದರು. ಹೋದಲ್ಲೆಲ್ಲ ಅದನ್ನು ಅವರು ಬಾಯಿ ತುಂಬ ಹಾಡಿ ಹೊಗಳಿದರು.

ರಾಮಕೃಷ್ಣ ವಿದ್ಯಾರ್ಥಿ ಭವನದಲ್ಲಿ ಜರುಗಿದ ವಿದ್ಯಾರ್ಥಿಗಳ ಸಭೆಯಲ್ಲಿ ( ಮಂಗಳೂರು ) ಅವರು ಮಂಗಳೂರಿನ ವಿದ್ಯಾರ್ಥಿಗಳಲ್ಲಿರುವ ಶಿಸ್ತನ್ನು ಹೊಗಳಿ ವಿದ್ಯಾರ್ಥಿಗಳು ತಮ್ಮಲ್ಲಿರುವ ಧೈರ್ಯ, ಉತ್ಸಾಹ, ಸಾಹಸ, ತ್ಯಾಗಗಳನ್ನು ಅನುಭವರಹಿತವಾದ ಆತುರತೆಯಿಂದ ಹಾಳುಗೆಡಿಸಬಾರದೆಂದು ಉಪದೇಶಿಸಿದರು. ಕಾಂಗ್ರೆಸ್ಸು ವಿಶಾಲ ಸಂಸ್ಥೆ, ನೀವೇ ಕಾಂಗ್ರೆಸ್ಸು, ಎಂದು ಹೇಳಿ ಕಾಂಗ್ರೆಸ್ಸಿನಲ್ಲಿ ಶಿಸ್ತಿನ ಸೈನಿಕರಾಗಿ ಸೇರಲು ಕೇಳಿಕೊಂಡರು ( ತಾ ೧೩ ). ಮಂಗಳೂರು ಮೈದಾನಿನ ಸಾರ್ವಜನಿಕ ಸಭೆಯಲ್ಲಿ ಬ್ರಿಟಿಶರ ಆಳಿಕೆಯಲ್ಲಿ ನಾವು ಬೇಟೆಗಾರನಿಗಾಗಿ ಕೊಳ್ಳೆಯನ್ನು ಸಂಪಾದಿಸಿ ಬರಿ ಎಲುಬಿಗೆ ಮಾತ್ರ ಬಾಧ್ಯರಾಗುವ ಬೇಟೆ ನಾಯಿಗಳಂತಾಗಿದ್ದೇವೆ, ನಾವು ನಾಯಿಗಳಲ್ಲ, ಸಿಂಹಗಳು ಎಂಬ ಅರಿವಾದೊಡನೆ ನಮಗೆ ಸ್ವಾತಂತ್ರ್ಯ ಗಳಿಸಲು ಸಾಧ್ಯವಾಗುವದು, ಎಂದರು. ಕಮ್ಯುನಿಸ್ಟ ಧೋರಣೆ ಎಲ್ಲೆಡೆಯಲ್ಲಿಯೂ ಅವರ ಟೀಕೆಗೆ ಗುರಿಯಾಯಿತು. ಪುತ್ತೂರಲ್ಲಿ ಕಾಂಗ್ರೆಸ್ಸಿನ ವಿಧಾಯಕ ಸಭಾಪ್ರವೇಶವನ್ನು ಪ್ರತಿಪಾದಿಸುತ್ತ ಅವರು ದೇಶದ್ರೋಹಿಗಳು ವಾಯಿ.ಸರಾಯರ ಕಾರ್ಯಕಾರಿ ಮಂಡಲದಲ್ಲಿ ಸೇರಿಕೊಂಡು ದೇಶದ ಪ್ರತಿನಿಧಿಗಳೆಂದು ಕೊಚ್ಚಿಕೊಳ್ಳುವದನ್ನು ತಡೆಯುವ ಸಲುವಾಗಿಯೇ ಕಾಂಗ್ರೆಸ್ಸು ಶಾಸನ ಸಭೆಗಳನ್ನು ಪ್ರವೇಶಿಸುತ್ತಿದೆಯೆಂದು ಹೇಳಿ, ಅಹಾರ ಪರಿಸ್ಥಿತಿ ಕೆಟ್ಟು ಬರಗಾಲ ಬಂದರೆ ಬಂಡಾಯ ಹೂಡುವದಾಗಿ ಎಚ್ಚರಿಕೆಯಿತ್ತರು. ಕಾರ್ಕಳ, ಮೂಡಬಿದ್ರೆ, ಪಾಣೆಮಂಗಳೂರು ಮೊದಲಾದ ಹಲವು ಸ್ಥಳಗಳಲ್ಲಿಗೂ ಅವರು ಭೆಟ್ಟಿಯಿತ್ತು ವಿಧಾಯಕ ಕಾರ್ಯಕ್ರಮದ ಮಹತ್ವ ವಿವರಿಸಿದರು.

ಶ್ರೀಮತಿ ಕಮಲಾದೇವಿ, ಶ್ರೀ ಕೆ ಆರ್ ಕಾರಂತ, ಜಿನರಾಜ ಹೆಗಡೆ, ಶ್ರೀನಿವಾಸ ಮಲ್ಯ ಮೊದಲಾದವರು ಶ್ರೀ ಕೃಪಲಾಣಿಯವರ ಕಾರ್ಯಕ್ರಮಗಳ ನೇತೃತ್ವ ವಹಿಸಿದ್ದರು. ಮಂಗಳೂರ ಪತ್ರಿಕೋದ್ಯಮಿಗಳು ಅವರಿಗೆ ಸತ್ಕಾರಕೂಟ ಏರ್ಪಡಿಸಿದ್ದರು. ತಾ|| ೧೫ ಕ್ಕೆ ಕೃಪಲಾಣಿಯವರು ಕೇರಳಕ್ಕೆ ಹೋದರು.

## ಬೆಂಗಳೂರು--ಮೈಸೂರು

ಬೆಂಗಳೂರ ನಗರ ಸಭೆಯ ಕಾಂಗ್ರೆಸ ಸದಸ್ಯರ ರಾಜೀನಾಮೆಯಿಂದ ಉಂಟಾದ ೧೧ ತೆರವು ಸ್ಥಳಗಳಿಗೆ ನಡೆಯುವ ಉಪ ಚುನಾವಣೆಗಳಿಗೆ ಮೈಸೂರು ಕಾಂಗ್ರೆಸ್ಸು ಪುನಃ ಸ್ಪರ್ಧಿಸಲು ನಿರ್ಧರಿಸಿದೆ.

ಕಾಂಗ್ರೆಸ ಸದಸ್ಯರು ಬೆಂಗಳೂರು ನಗರ ಸಭೆಗೆ ರಾಜೀನಾಮೆಯಿತ್ತಿರುವ ಪರಿಣಾಮವಾಗಿ ಕಾಂಗ್ರೆಸ್ ಕಾರ್ಯಕರ್ತರಲ್ಲಿಯೇ ಮನಃಕಷಾಯ ಉತ್ಪನ್ನವಾಗಿರುವದರಿಂದ ಮರು ಚುನಾವಣೆಯಲ್ಲಿ ಕಾಂಗ್ರೆಸ್ಸು ಭಾಗವಹಿಸುವದು ಯೋಗ್ಯವಲ್ಲವೆಂದು ಹಲ ಕಾಂಗ್ರೆಸ್ಸಿಗರು ಆಕ್ಷೇಪವೆತ್ತಿದ್ದಾರೆ ಅದಕ್ಕೆ ಮೈಸೂರು ಪಾರ್ಲಮೆಂಟರಿ ಬೋರ್ಡ ಅಧ್ಯಕ್ಷ ಟಿ. ಸುಬ್ರಹ್ಮಣ್ಯರು ಒಂದು ಹೇಳಿಕೆಯಲ್ಲಿ ಈ ಘಟನೆಯಿಂದ ಬೆಂಗಳೂರಿನ ಮಹಾ ಜನರ ಅಭಿಪ್ರಾಯ ಕಾಂಗ್ರೆಸಿನ ಕುರಿತು ಹೇಗೆ ರೂಪುಗೊಂಡಿದೆಯೆಂಬುದನ್ನು ನಿರ್ಧರಿಸುವ ಸಲುವಾಗಿ ಕಾಂಗ್ರೆಸ್ಸು ಉಪಚುನಾವಣೆಯಲ್ಲಿ ಸ್ಪರ್ಧಿಸುತ್ತಿದೆಯೆಂದು ಹೇಳಿದ್ದಾರೆ.

ನಗರ ಸಭೆಯ ಉಪ ಚುನಾವಣೆಯಲ್ಲಿ ಕಾಂಗ್ರೆಸ ಹುರಿಯಾಳುಗಳನ್ನು ನಿಲ್ಲಿಸುವುದರಿಂದ ಒಡಕು ಹೆಚ್ಚುವದೆಂಬ ಕಾರಣದಿಂದ ಬೆಂಗಳೂರು ಕಾಂಗ್ರೆಸ ಕಾರ್ಯಕರ್ತರು ಚುನಾವಣೆಗೆ ದುಡಿಯಲು ನಿರಾಕರಿಸುವ ಗೊತ್ತುವಳಿ ಮಾಡಿದ್ದಾರೆ.

ಆಚಾರ್ಯ ಜೆ. ಬಿ. ಕೃಪಲಾನಿಯವರ ಪತ್ನಿ ಸುಚೇತಾ ಅವರು ಬೆಂಗಳೂರ ವಿದ್ಯಾರ್ಥಿ ಕಾಂಗ್ರೆಸ್ ಆಶ್ರಯದಲ್ಲಿ ನಡೆದ ಸಭೆಯಲ್ಲಿ ಭಾರತದಲ್ಲಿ ಬ್ರಿಟಿಶ ಸರಕಾರದ ಅಂತ್ಯವೇ ಕಾಂಗ್ರೆಸ ಹೋರಾಟದ ಗುರಿಯೆಂದು ಸಾರಿದರು. ದೇಶಿಯ ವಿದ್ಯಾಶಾಲೆಯ ಆವಾರದಲ್ಲಿ ಸೇರಿದ ಸಭೆಯಲ್ಲಿ ಅವರು ಭಾರತದಲ್ಲಿ ತಾವು ಭೆಟ್ಟಿಯಿತ್ತ ಶಿಕ್ಷಣ ಶಿಬಿರಗಳಲ್ಲೆಲ್ಲ ಮೈಸೂರ. ಕಸ್ತೂರಬಾ ಶಿಕ್ಷಣ ಶಿಬಿರವೇ ಅತ್ಯುತ್ತಮವಾದುದೆಂದು ಹೊಗಳಿದರು.

ರೇಡಿಯೋ ಮತ್ತು ಟೆಲಿವಿಜನ್ ಕಾರಖಾನೆಯನ್ನು ಮೈಸೂರು ಸಂಸ್ಥಾನದಲ್ಲಿ ಸ್ಥಾಪಿಸುವ ಸಲುವಾಗಿ "ಮೈಸೂರು ಎಲಿಮೇಕ ಲಿಮಿಟೆಡ್" ಎಂಬ ಸಂಸ್ಥೆಯನ್ನು ಸ್ಥಾಪಿಸಲು ಮೈಸೂರು ಸರಕಾರ ಲಂಡನಿನ ಫಿಲಿಪ ರೇಡಿಯೋದೊಡನೆ ಒಡಂಬಡಿಕೆ ಮಾಡಿಕೊಂಡಿದ್ದು ೨೫ ಲಕ್ಷ ರೂ. ಬಂಡವಳದ ಕಂಪೆನಿ ಪ್ರಾರಂಭಿಸಲು ದಿ. ಬ. ಕೆ. ಮ್ಯಾಥ್ಯೂನ್ನರ ಅಧ್ಯಕ್ಷತೆಯಲ್ಲಿ ಒಂದು ಡೈರೆಕ್ಟರ ಬೋರ್ಡು ರಚಿಸಲಾಗಿದೆ:

ಮಲ್ಲೇಶ್ವರದ ಹೆರಿಗೆ ಆಸ್ಪತ್ರೆಯಲ್ಲಿ ಒಂದು ಬ್ಲಾಕ್ ಕಟ್ಟಿಸುವ ಸಲುವಾಗಿ ಧರ್ಮಪ್ರಕಾಶ ಬಿ. ಎಂ. ಶ್ರೀನಿವಾಸಯ್ಯನವರು ೧೦ ಸಾವಿರ ರೂ. ದಾನ ಮಾಡಿದ್ದಾರೆ.

ಮೈಸೂರ ಅರಮನೆಯ ಧರ್ಮಾಧಿಕಾರಿಗಳಾಗಿದ್ದ ಮಹಾ ವಿದ್ವಾನ್ ಪಂಡಿತರತ್ನ ಕಾಶಿ ಶೇಷ ವೆಂಕಟಾಚಲ ಶಾಸ್ತ್ರಿಯವರು ತಮ್ಮ ೯೬ ನೇ ವಯಸ್ಸಿನಲ್ಲಿ ತಾ ೧೩ ಕ್ಕೆ ತೀರಿಕೊಂಡರು.

ಕವಿವರ್ಯ ದ. ರಾ. ಬೇಂದ್ರೆಯವರ ೫೦ ನೇ ಹುಟ್ಟುಹಬ್ಬ ತಾ. ೧೭ ಕ್ಕೆ ಬೆಂಗಳೂರಲ್ಲಿ ಸಾಹಿತ್ಯ ಪರಿಷತ್ತಿನ ಕಚೇರಿಯಲ್ಲಿ ಶ್ರೀ ಡಿ. ಸಿ. ಸುಬ್ಬರಾಯಪ್ಪನವರ ಅಧ್ಯಕ್ಷತೆಯಲ್ಲಿ ಆಚರಿಸಲ್ಪಟ್ಟಿತು. ಕವಿವರ್ಯರಿಗೆ ಆಯುರಾರೋಗ್ಯ ಕೋರುವ ಗೊತ್ತುವಳಿಯಾಯಿತು.

ಕೋಲಾರದ ಚಿನ್ನದ ಗಣಿಯ ೨೪೦೦೦ ಕೂಲಿಕಾರರು ಸಂಬಳ ಹೆಚ್ಚಿಸುವ ಮತ್ತು ಇತರ ಬೇಡಿಕೆಗಳನ್ನು ಮುಂದೊಡ್ಡಿ ಹೂಡಿರುವ ಸಂಪು ಇನ್ನೂ ಹಾಗೆಯೇ ಸಾಗಿದ್ದು ಸರಕಾರದವರಾಗಲಿ ಯಾರಾಗಲಿ ಈ ಪರಿಸ್ಥಿತಿಯನ್ನು ನಿವಾರಿಸಲು ಯತ್ನಿಸದಿರುವದರಿಂದ ಈ ವಿಷಯು ವಿಚಾರ ಮಾಡಲು ಸಂಸ್ಥಾನದ ನಾನಾ ಕೂಲಿಕಾರ ಸಂಘಗಳ ಅಧ್ಯಕ್ಷ ಕಾರ್ಯದರ್ಶಿಗಳ ಸಭೆಯೊಂದು ಬೆಂಗಳೂರಲ್ಲಿ ಶ್ರೀ ಕೆ. ಟಿ. ಭಾಷ್ಯಂ ಅವರ ಅಧ್ಯಕ್ಷತೆಯಲ್ಲಿ ಸೇರಿತು. ಸಂಪುಗಾರರ ಸಹಾಯಾರ್ಥ ನಿಧಿ ಕೂಡಿಸಲು ಒಂದು ಸಮಿತಿ ರಚಿಸಿದ್ದಲ್ಲದೆ ಈ ಪರಿಸ್ಥಿತಿಯನ್ನು ಚರ್ಚಿಸಲು ಶ್ರೀ ಭಾಷ್ಯಂ ಅವರ ನೇತೃತ್ವದಲ್ಲಿ ಸರಕಾರದ ಕಡೆಗೆ ಒಂದು ಶಿಷ್ಟಮಂಡಲ ಒಯ್ಯಬೇಕೆಂದು ನಿರ್ಧರಿಸಲ್ಪಟ್ಟಿತು. ತಾ. ೨೭ ನ್ನು ಸಂಪಿನ ದಿನವಾಗಿ ಆಚರಿಸಬೇಕೆಂದು ನಿರ್ಧರಿಸಲಾಯಿತು.

ಶ್ರೀ ಥಕ್ಕರಬಾಪಾ ಅವರೊಡನೆ ಚಿತ್ರದುರ್ಗ ಜಿಲ್ಲೆಯ ಬರಗಾಲ ಪ್ರದೇಶಗಳನ್ನು ಸಂದರ್ಶಿಸಿ ಬಂದ ಮೈಸೂರ ಕಾಂಗ್ರೆಸ್ ಅಧ್ಯಕ್ಷ ಶ್ರೀ ನಿಜಲಿಂಗಪ್ಪನವರು ಪತ್ರಿಕಾಪ್ರತಿನಿಧಿಗಳ ಸಮ್ಮೇಲನದಲ್ಲಿ ಸರಕಾರದ ಮೇಲೆ ೬ ಮುದ್ದೆಗಳ ಆರೋಪವನ್ನೂ ೭ ಮುದ್ದೆಗಳ ಸಲಹೆಗಳನ್ನೂ ಒಂದು ಮುದ್ದೆಯ ಉಪಾಯವನ್ನೂ ಸೂಚಿಸಿದರು. ಆಹಾರವನ್ನು ಸಕಾಲದಲ್ಲಿ ಸಂಗ್ರಹಿಸಲೆತ್ನಿಸಲಿಲ್ಲ, ಕಾಳು ಹೊರ ಸಾಗಿಸಲು ವ್ಯಾಪಾರಿಗಳಿಗೆ ರಹದಾರಿ ಕೊಟ್ಟರು. ನಿಯಂತ್ರಣ ಮತ್ತು ಧಾನ್ಯ ಸಂಗ್ರಹಾಜ್ಞೆಗಳ "ಗುರುತರ" ದೋಷಗಳ ಪರಿಣಾಮವಾಗಿ ರೈತನಿಗೆ ತಿನ್ನಲು ಉಳಿಯದಂತೆ ಸಂಗ್ರಹಿಸಿದರು, ಬ್ರಿಟಿಶ ಹಿಂದುಸ್ತಾನದ ಕಳ್ಳಪೇಟೆಗಳಿಗೆ ಕಳ್ಳ ದಾರಿಯಿಂದ ಧಾನ್ಯ ಸಾಗಿಸಲು ಬಿಟ್ಟರು, ಸಾರ್ವಜನಿಕರೂ ಕಾಂಗ್ರೆಸ್ಸೂ ಸೆಪ್ಟೆಂಬರದಲ್ಲೆ ಬರಗಾಲದ ಎಚ್ಚರಿಕೆಯಿತ್ತರೂ ಕೇಳದೆ ಕಾಲಹರಣ ಮಾಡಿದರು, ಇತ್ಯಾದಿಗಳು ಅವರ ಆರೋಪಗಳಾಗಿದ್ದರೆ, ನಿರಾಶ್ರಿತರ ಪಾಲನೆಯ ಶಿಬಿರಗಳ ಸ್ಥಾಪನೆ, ನಿಷ್ಪಕ್ಷಪಾತ ಹಂಚಿಕೆ, ಹೊರಗಿನಿಂದ ಆಹಾರದ ಆಯಾತ ಮೊದಲಾದವುಗಳು ಅವರ ಸಲಹೆಗಳು. ಅವರು ಸೂಚಿಸಿದ ಪರಿಹಾರೋಪಾಯವೆಂದರೆ ಸಂಸ್ಥಾನದಲ್ಲಿ ಹೊಣೆಗಾರ ಸರಕಾರದ ಸ್ಥಾಪನೆ, ಸರಕಾರದ ಕಾರ್ಯಗಳಲ್ಲಿ ಸಾರ್ವಜನಿಕರ ಮೇಲ್ವಿಚಾರ.

ತಾ॥ ೧೭ ರಿಂದಾರಂಭಿಸಿ ಮೈಸೂರು ಸಂಸ್ಥಾನದಲ್ಲಿ ಎಲ್ಲ ವರ್ಗದ ಸೀದಾ ಕಾರ್ಡಗಳ ಧಾನ್ಯ ಪ್ರಮಾಣಗಳನ್ನು ಕಡಿಮೆ ಮಾಡಲಾಗಿದೆ.

ಶ್ರೀ ಥಕ್ಕರಬಾಪಾ ಅವರು ಕ್ಷಾಮ ಪೀಡಿತ ಪ್ರದೇಶದಿಂದ ಮರಳಿದವರು ಧಾನ್ಯ ವಿತರಣೆಯಲ್ಲಿರುವ ಲೋಪದೋಷಗಳನ್ನು ಉಲ್ಲೇಖಿಸಿ "ಆಹಾರ ಪರಿಸ್ಥಿತಿಯನ್ನು ಸುಧಾರಿಸದೆ ಹೋದರೆ ಮೈಸೂರು ೧೯೪೬ ರ ಬಂಗಾಲವಾದೀತು" ಎಂದು ಎಚ್ಚರಿಕೆ ಕೊಟ್ಟಿದ್ದಾರೆ.




### ಮುಂಬಯಿ ಶೇರ ಪೇಟೆ

ಟಾಟಾ ಸ್ಟೀಲ ಡೆಫರ್ಡ ಪಾಲುಗಳು ಈ ವಾರ ಹಿಂದೆಂದೂ ಕಾಣದ ಉಚ್ಚಮಟ್ಟಕ್ಕೆ, ರೂ. ೨೮೪೨-೮-೦ಕ್ಕೇರಿದವು. ಆದರೆ ಮುಂದೆ ೨೮೦೦-ಕ್ಕಿಳಿದು ಪುನಃ ೨೮೧೬-೪-೦ ಕ್ಕೆ ಹೋದವು. ಡಾಯಿಂಗ ಪಾಲುಗಳು ಕಳೆದ ವಾರಕ್ಕಿಂತ ಮೇಲ್ಮಟ್ಟಕ್ಕೆ ಬಂದು ೨೨೨೨-೮-೦ ಕ್ಕೆ ಮುಟ್ಟಿದರೂ ೨೧೯೨-೮-೦ ಕ್ಕಿಳಿದು ೨೨೦೭-೮-೦ ಕ್ಕೇರಿದವು. ಸ್ವದೇಶಿ ಗಿರಣಿ ಪಾಲುಗಳು ಇಳಿಮುಖವಾಗಿ ೭೦೨-೦-೦ ರಿಂದ ೬೮೭-೦-೦ ಕ್ಕೆ ಸೆಂಚುರಿ ೯೪೮-೦-೦ ರಿಂದ ೯೪೫-೦-೦ ಕ್ಕೆ ಸೆಂಟ್ರಲ್ ಇಂಡಿಯಾ ೪೪೮-೦-೦ರಿಂದ ೪೪೨-೮-೦ಕ್ಕೆ ಬೇಲಾಪೂರ ೨೪೯-೦-೦ ರಿಂದ ೨೪೬-೦-೦ ಕ್ಕಿಳಿದವು. ಅಸೋಸಿಯೇಟೆಡ್ ಸಿಮೆಂಟ್ಸ ೩೩೭-೮-೦ ರಿಂದ ೩೩೫-೮-೦ ಕ್ಕಿಳಿಯಿತು. ಸೆಂಟ್ರಲ್ ಬ್ಯಾಂಕು ಪಾಲು ಕಳೆದ ವಾರಕ್ಕಿಂತ ಸುಧಾರಿಸಿ ೧೮೯-೧೨-೦ ಕ್ಕೆ ಹೋದರೂ ಮುಂದೆ ಎಲ್ಲ ಪಾಲುಗಳ ಗೂಡ ಕೆಳಸರಿದು ೧೮೯-೦-೦ಕ್ಕೆ ಬಂತು. ಇಂಪೀರಿಯಲ್ ಬ್ಯಾಂಕ ಎಫ್. ಸಿ. ೨೩೯೫-೦-೦ ರಲ್ಲಿ ಕಳೆದ ವಾರಕ್ಕಿಂತ ಕೆಳಮಟ್ಟದಲ್ಲಿ ಸ್ಥಿರವಾಗಿತ್ತು. ರಿಝರ್ವ ಬ್ಯಾಂಕ ೧೫೬-೮-೦.

ಸರಕಾರಿ ಭದ್ರತೆಗಳಲ್ಲಿ ಜಿ. ಪಿ. ನೋಟು ಕೆಲ ಆಣೆ ಕೆಳಸರಿದು ೧೦೩-೪-೦ ದಿಂದ ೧೦೩ ಕ್ಕೆ ಬಂತು. ೩॥ ದರದ ೧೯೪೭-೫೦ ರ ಸಾಲಗಳು ೧೦೩-೬-೦ ರಲ್ಲಿಯೇ ಇದ್ದರೆ ೩॥ (೧೯೫೦) ೧೦೧-೧೨-೦ ರಲ್ಲಿದೆ.

### ಚಿನ್ನ—ಬೆಳ್ಳಿ

ಹಲ ದಿನಗಳಿಂದ ೯೦ ರೂಪಾಯಿಗೂ ಮೇಲ್ಮಟ್ಟದಲ್ಲಿಯೇ ನಿಂತಿದ್ದ ಚಿನ್ನ ಶಿಥಿಲತೆಯ ಸೂಚನೆ ಕೊಡಹತ್ತಿದೆ. ಕಳೆದ ವಾರಾಂತ್ಯದಲ್ಲೆ ೯೦-೪-೦ ಕ್ಕೆ ಬಂದಿದ್ದ ತಯಾರಿ ಚಿನ್ನ ಈ ವಾರ ಇನ್ನೂ ಕೆಲ ಆಣೆ ಕಳೆದುಕೊಂಡು ೮೯--೮—೦ ಕ್ಕೆ ಬಂತು. ಕಳೆದ ವಾರದಲ್ಲಿ ೧೪೮—೦—೦ ಕ್ಕೂ ಮಿಕ್ಕಿ ಹೋಗಿದ್ದ ಬೆಳ್ಳಿಯೂ ಈ ವಾರ ೧೪೩-೧-೦ ಕ್ಕಿಳಿದು ೧೪೩--೧೪-೦ ಕ್ಕೇರಿತು. ಸಾವರೀನ ರೂ ೬೩-೮-೦

### ಅರಳೆಪೇಟೆ

ಅರಳೆ ಕಳೆದ ವಾರ ಕಳೆದುಕೊಂಡದ್ದನ್ನು ತಕ್ಕಮಟ್ಟಿಗೆ ಗಳಿಸಿಕೊಂಡು ಈ ವಾರ ಮೇಲೇರಿದ್ದನ್ನು ಕಾಣುತ್ತೇವೆ. ಮಾರ್ಚ ವಾಯಿದೆ ೪೫೫-೮-೦ ಮೇ ೪೬೩-೪-೦ ಜುಲೈ ೪೭೩--೧೨-೦ ಸಪ್ಟಂಬರ ೪೮೮—೪—೦ ರ ವರೆಗೂ ಹೋಗಿವೆ.

### ಎಣ್ಣೆಕಾಳು

| | |
|---|---|
| ಶೇಂಗಾ | ರೂ. ೧೦೩—೮—೦ |
| ಆಗಸಿ | ,, ೨೧-೧೨—೦ |
| ಅಗಸಿಎಣ್ಣೆ | ,, ೧೩—೨—೦ |

### ಸಾಂಗಲಿ ಪೇಟೆ

| | | |
|---|---|---|
| ಬೆಲ್ಲ (ಹೇರು) | ರೂ. | ೪೩ — ೬೦ |
| ಅರಿಸಿಣ | ,, | ೬೨ — ೭೨ |
| ಮೆಣಸಿನಕಾಯಿ | ,, | ೧೫೦ — ೧೮೫ |
| ಶೇಂಗಾ (ಖಂಡಿ) | ,, | ೮೮ — ೯೦ |
| ಶೇಂಗಾ ಎಣ್ಣೆ (ಮಣ) | | ೧೨—೧—೦ |
| ದೇಶಿ ತಂಬಾಕು (ಹೇರು) | | ೧೦೦ — ೧೭೫ |

### ಶಿವಮೊಗ್ಗೆ

| | |
|---|---|
| ತೀರ್ಥಹಳ್ಳಿ ದೇಶಾವರ ಅಡಿಕೆ ಮಣ ರೂ. | ೨೨-೨೬ |
| ಕಡಿ ಹಸನ್ | ೨೬-೮೦ |
| ತೊರಸಾಲು | ೨೦-೨೧ |
| ಕೊಪ್ಪ ಶೃಂಗೇರಿ | ೨೦-೨೩ |
| ಅನ್ನಾವರಂ | ೧೮-೨೧ |
| ರಾಜಾ ಆಲವು | ೨೨-೨೪ |
| ರಾಶಿ ಬೆಟ್ಟೆ | ೯॥-೧೧ |
| ನಯ ಬೆಟ್ಟೆ | ೧೧-೧೧॥ |
| ವಂತಿ | ೧೨-೧೨। |
| ನುಲಿ | ೨೨-೨೪ |

## ಕೇಂದ್ರ ಶಾಸನ ಸಭೆಯಲ್ಲಿ

೪ ನೇ ಪುಟದಿಂದ

ಸೇನಾಪತಿ ಕ್ಲಾಡ ಆಚಿನಲೆಕ್ಕರು ಈ ಸೈನಿಕರ ವಿಷಯದಲ್ಲಿ ಸರಕಾರದವರು ವಹಿಸಿರುವ ಉದಾರ ಧೋರಣೆಯನ್ನು ವಿವರಿಸಿ ಇಡಿ ಸೈನ್ಯದ ಹಿತ ಮತ್ತು ಶಿಸ್ತನ್ನು ಕಾಯ್ದುಕೊಳ್ಳುವದು ಅವಶ್ಯವಿರುವದರಿಂದ ಈ ವಿಚಾರಣೆಗಳನ್ನು ನಡೆಸುವದು ಅವಶ್ಯಕವೆಂದೂ ರಾಜಕೀಯ ತತ್ವಕ್ಕಾಗಿ ಸೈನಿಕನು ಪಕ್ಷತ್ಯಾಗ ಮಾಡುವದು ಸಲ್ಲದೆಂದು ತೋರಿಸುವದೇ ವಿಚಾರಣೆಯ ಉದ್ದೇಶವೆಂದೂ ಹೇಳಿದರು. ಪಂ. ಕುಂಝುರು ಅವರು ಕ್ಯಾ. ಅಬ್ದುಲ ರಶೀದರ ಬಿಡುಗಡೆ ಮಾಡಬೇಕೆಂದು ಕೋರಿದರು.

ಸಾಮ್ರಾಜ್ಯ ಡಾಲರ ಸಂಗ್ರಹದಲ್ಲಿರುವ ಹಿಂದುಸ್ತಾನದ ಪಾಲಿನ ಡಾಲರಗಳನ್ನು ತಿರುಗಿ ಪಡೆಯಬೇಕೆಂದು ಮೋತೀಲಾಲರು ಮಂಡಿಸಿದ ಗೊತ್ತುವಳಿಯೂ ಸೋಲಿಸಲ್ಪಟ್ಟಿತು

ಪ್ರಶ್ನೋತ್ತರ ಕಾಲದಲ್ಲಿ ೧೯೪೫ ರಲ್ಲಿ ವಿದೇಶಗಳಿಂದ ಹಿಂದುಸ್ತಾನಕ್ಕೆ ೧೪೧೦೦೦೦೦ ರೂಪಾಯಿಯ ಸೌಂದರ್ಯವರ್ಧಕ ಸಾಮಗ್ರಿಗಳನ್ನು ತರಿಸಲಾಯಿತೆಂದು ಮೋತೀಲಾಲರಿಗೆ ತಿಳಿಸಲಾಯಿತು.

---

ಬೆಂಗಳೂರ ನಗರ ಕೆಂಗೇರಿ ಕಸ್ತೂರಬಾ ಶಿಕ್ಷಣ ಶಿಕ್ಷಣ ಪಡೆದ ಮಹಿಳೆಯರ ಗೌರವಾರ್ಥ ತಾ. ೧೭ ಕ್ಕೆ ಧರ್ಮಪ್ರಕಾಶ ವೆಂಕಾಜಿರಾಯರು ಏರ್ಪಡಿಸಿದ ಔತಣ ಕೂಟದಲ್ಲಿ ಭಾಷಣ ಮಾಡುತ್ತ ಮೈಸೂರ ಕಾಂಗ್ರೆಸ್ಸಿನ ಹಿಂದಿನ ಅಧ್ಯಕ್ಷರಾದ ಶ್ರೀ ಎಚ್ ಸಿ ದಾಸಪ್ಪನವರು ಕಸ್ತೂರಬಾ ಶಿಕ್ಷಣ ಶಿಬಿರದ ಪ್ರಭಾವ ಅಟಂ ಬಾಂಬ ಪ್ರಭಾವಕ್ಕಿಂತಲೂ ಹಿರಿದಾದುದೆಂದು ಹೇಳಿದರು. ಔತಣಕ್ಕೆ ಶ್ರೀಮತಿ ಉಮಾಬಾಯಿ ಕುಂದಾಪುರ, ಬಳ್ಳಾರಿ ಸಿದ್ದಮ್ಮ ಮೊದಲಾಗಿ ಹಲ ಪ್ರಮುಖರು ಆಗಮಿಸಿದ್ದರು.

## ದಕ್ಷಿಣ ಕನ್ನಡ

ಮಂಗಳೂರಿನ ಹಂಚಿನ ಕಾರಖಾನೆಗಳಲ್ಲಿ ಕಳೆದ ತಿಂಗಳ ಬೋನಸ್ಸ ಮತ್ತು ಇತರ ಬೇಡಿಕೆಗಳನ್ನು ಮುಂದೊಡ್ಡಿ ಕೂಲಿಕಾರರು ಹೂಡಿದ್ದ ಸಂಪಿನ ತೀರ್ಮಾನ ಮಾಡಲು ಜಿಲ್ಲಾ ಕಲೆಕ್ಟರರಿಗೊಪ್ಪಿಸಿ ಸಂಪು ನಿಲ್ಲಿಸಲ್ಪಟ್ಟಿತ್ತು. ಕೂಲಿಕಾರರ ಪರವಾಗಿ ಬೋನಸ್ ಬೇಡಿಕೆ ಹೊರತು ಇತರ ಎಲ್ಲ ಬೇಡಿಕೆಗಳು ಹಿಂತೆಗೆಯಲ್ಪಟ್ಟವು. ಬೋನಸ್ ಸಂಬಂಧದಲ್ಲಿ ಕಲೆಕ್ಟರರು ಕೊಟ್ಟ ತೀರ್ಮಾನದಂತೆ ಧಣಿಯರು ಕೂಲಿಕಾರರಿಗೆ ಇದೆ ಮೇ ತಿಂಗಳ ಅಂತ್ಯದೊಳಗೆ ಅವರ ಪ್ರಕೃತ ಮೂಲ ಕೂಲಿಯ ಮಾನದಲ್ಲಿ ಮೂರು ತಿಂಗಳ ಸಂಬಳದಷ್ಟು ಬೋನಸ್ ಕೊಡಬೇಕಾಗುವದು.

ಇನ್ನಂಜೆಯ ಶ್ರೀ ವಿಷ್ಣುಮೂರ್ತಿ ಹಯವದನ ಸ್ವಾಮಿ ಹಾಯ್‌ಸ್ಕೂಲ ವರ್ಧಂತ್ಯುತ್ಸವ ಸಮಾರಂಭ ತಾ. ೧೬ಕ್ಕೆ ಡಾ. ಎನ್. ಎಸ್. ಹರ್ಡಿಕರ ಅಧ್ಯಕ್ಷತೆಯಲ್ಲಿ ಸಾಂಗವಾಯಿತು. ತಾ. ೧೪ ರಿಂದಲೇ ವಿವಿಧ ವಿನೋದಾವಳಿ, ಆಟಪಾಟ ಸ್ಪರ್ಧೆ ಮೊದಲಾದ ಕಾರ್ಯಕ್ರಮಗಳು ಜರಗಿದವು. ಜಿಲ್ಲಾ ಬೋರ್ಡ ಅಧ್ಯಕ್ಷ ಶ್ರೀ ಆರೂರು ಲಕ್ಷ್ಮೀನಾರಾಯಣರಾಯರು ಸ್ವಾಗತ ಭಾಷಣ ಮಾಡಿದರು. ಡಾ. ಹರ್ಡೀಕರರು ಶಾಲೆಗೆ ಉತ್ತರೋತ್ತರ ಕೋರಿ ಭಾಷಣ ಮಾಡಿದರು. ಶ್ರೀ ಎಸ್. ಎಸ್. ಕಾರಂತ (ಹುಬಳಿ ಗಜೆಟ) ಹಾಗು ಡಾ. ಹರ್ಡೀಕರರು ವಿದ್ಯಾರ್ಥಿಗಳು ರಾಜಕಾರಣದಲ್ಲಿ ಭಾಗವಹಿಸಬಹುದಾದರೂ ಪಕ್ಷಗಳ ರಾಜಕಾರಣದಲ್ಲಿ ಕೈಹಾಕಬಾರದೆಂದೂ ವಿಧಾಯಕ ಕಾರ್ಯಕ್ರಮ ಕೈಕೊಳ್ಳಬೇಕೆಂದೂ ಮುಂತಾಗಿ ವಿದ್ಯಾರ್ಥಿಗಳ ಪ್ರಶ್ನೆಗಳಿಗೆ ಉತ್ತರವಿತ್ತರು.

೭ನೇ ದಕ್ಷಿಣ ಕನ್ನಡ ವಿದ್ಯಾರ್ಥಿ ಸಮ್ಮೇಲನ ಡಾ. ಎನ್. ಎಸ್. ಹರ್ಡೀಕರರ ಅಧ್ಯಕ್ಷತೆಯಲ್ಲಿ ತಾ. ೧೬, ೧೭ ಕ್ಕೆ ಮಂಗಳೂರಲ್ಲಿ ಸಾಂಗವಾಯಿತು. ಇಡೀ ಜಿಲ್ಲೆಯಿಂದ ಪ್ರತಿನಿಧಿಗಳು ಬಂದಿದ್ದರು. ಡಾ. ಹರ್ಡೀಕರರು ತಮ್ಮ ಅಧ್ಯಕ್ಷ ಭಾಷಣದಲ್ಲಿ ವಿದ್ಯಾರ್ಥಿಗಳು ರಾಷ್ಟ್ರೀಯತೆಯನ್ನು ಬೆಳೆಸಿಕೊಳ್ಳಬೇಕೆಂದು ಉಪದೇಶಿಸಿದರು. ೨೪ ಗೊತ್ತುವಳಿಗಳು ಅಂಗೀಕರಿಸಲ್ಪಟ್ಟವು

## ಮುಂಬಯಿ ನಾವಿಕರ ದಂಗೆ

ಮುಂಬಯಿಯಲ್ಲಿ ಹಿಂದೀ ನಾವಿಕರ ಸಂಪು ವಿರಾಟಸ್ವರೂಪವನ್ನು ತಾಳಿದೆ. ಕಾಸಲ್ ಬ[illegible]ನಲ್ಲಿದ್ದ ಹಿಂದೀ ನಾವಿಕರು ಮತ್ತು ಬ್ರಿಟಿಶ[illegible]ರೊಳಗೆ ಯುದ್ಧವೇ ನಡೆದಿದೆ. ಇತ್ತಂ[illegible] ಬಂದೂಕು ಮತ್ತು ಮಶಿನಗನ್‌ಗಳನ್ನು ಉಪಯೋಗಿಸಿರುವರು. ನಾವಿಕರಿದ್ದ ಬರಾಕುಗಳ ಮುಂದೆ ಬ್ರಿಟಿಶ ಕಾವಲುಗಾರರನ್ನು ನಿಲ್ಲಿಸಲಾಗಿದೆ. ಬಂದರದಲ್ಲಿದ್ದ ನರ್ಮದಾ ಹಡಗವನ್ನು ಹಿಂದೀಯರು ವಶಪಡಿಸಿಕೊಂಡು ಬರಾಕುಗಳಲ್ಲಿದ್ದ ನಾವಿಕರ ಮೇಲೆ ಗುಂಡೆಸೆಯುವದನ್ನು ಬಿಡದೇ ಇದ್ದರೆ ಹಡಗವು ಗುಂಡೆಸೆಯುವದೆಂದು ಎಚ್ಚರಿಸಿರುವರು. ಈಗ ಕೇಂದ್ರ ಸಂಪು ಸಮಿತಿಯ ಅಧ್ಯಕ್ಷರಾದ ಖಾನ ಮತ್ತು ಕಾಂಗ್ರೆಸ್ಸಿಗರೊಬ್ಬರ ಸಂಧಾನ ಯತ್ನದ ಮೇರೆಗೆ ಕಾಸಲ್ ಬರಾಕಿನಲ್ಲಿ ಸಂಧಿಯಾಗಿ ಇತ್ತಂಡದವರೂ ಗುಂಡು ಹಾರಿಸುವದನ್ನು ನಿಲ್ಲಿಸಿರುವರು. ಮುಂಬಯಿಯಲ್ಲಿ ಪರಿಸ್ಥಿತಿ ಬಹಳ ಗಂಭೀರವಾಗಿದೆ.

ಈ ಬಡಿದಾಟದ ಕಾರಣವಿಷ್ಟೆ. ಶ್ರೇಷ್ಠ ಆಹಾರ ಮುಂತಾದ ಬೇಡಿಕೆಗಳನ್ನು ಪ್ರತಿಪಾದಿಸಲು ಹಿಂದೀ ನಾವಿಕರು ಮೊನ್ನೆ ಸಂಪು ಹೂಡಿದ್ದರು ಮತ್ತು ಬರಾಕುಗಳಿಂದ ಹೊರಗೆಬಿದ್ದು ನಗರದ ರಸ್ತೆಗಳಲ್ಲಿ ಮತ ಪ್ರದರ್ಶನಗಳನ್ನು ಮಾಡಿದರು. ಒಂದೆರಡು ಕಡೆ ದುರ್ಘಟನೆಗಳು ಸಂಭವಿಸಿದುವು. ಹಿಂಸಾಚಾರ ನಡೆದುದರಿಂದ ನಾವಿಕರು ತಂತಮ್ಮ ಬರಾಕುಗಳಿಗೆ ಹಿಂತೆರಳ ಬೇಕೆಂದು ನೌಕಾಧಿಕಾರಿ ಗಾಡಫ್ರೇಯವರು ಆಜ್ಞಾಪಿಸಿದ, ಪ್ರತಿಭಟಿಸಿದ ನಾವಿಕರನ್ನು ಲಾರಿಗಳಲ್ಲಿ ಹೇರಿಕೊಂಡು ಬರಾಕುಗಳಿಗೊಯ್ದರು. ಕೆಲವರನ್ನು ಕೆಲಸದಿಂದಲೂ ತಳ್ಳಿಹಾಗಲಾಯಿತಲ್ಲದೆ ಬರಾಕುಗಳ ಸುತ್ತಲೂ ಹಿಂದೀ ಮತ್ತು ಬ್ರಿಟಿಶ ಸೈನಿಕರನ್ನು ಕಾವಲು ನಿಲ್ಲಿಸಿದರು. ಆದರ ಪರಿಣಾಮವಾಗಿ ತಿಕ್ಕಾಟವುಂಟಾಗಿ ಈ ಪರಿಸ್ಥಿತಿ ತಲೆಯೆತ್ತಿತು.

ಚಿಕ್ಕ ಕತೆ

# “ಅವನ ಬಾಳು!”

**ಮಾಸ್ಕೇರಿ ರಾಮರಾಯ ಘುಂಡಸಿ**

ರಾಯರು ಊಟ ಮಾಡಿ ಮಲಗಿದವರು ಆದೇ ಎದ್ದು ತಮ್ಮ ದಿವಾಣಖಾನೆಯಲ್ಲಿ ಬಂದು ಕುಳಿತಿದ್ದರು. ಬಲ ಪಕ್ಕದಲ್ಲಿ ಎರಡು ಸಿದ್ದೇಶ್ವರ ಜೋರಿ, ಎಡಪಕ್ಕದಲ್ಲಿ ಖಾತೆಕಿರ್ದಿ ಪುಸ್ತಕಗಳ ಕಪಾಟು, ನೆಲದಮೇಲೆ ಬಣ್ಣದ ಜಮುಖಾನ, ಗೋಡೆಗೆ ಆನಿಸಿ ಕೂತುಕೊಳ್ಳಲು ಬೆಳ್ಳಗಿನ ಲೋಡುಗಳು. ಅಕ್ಕಪಕ್ಕದ ಲೋಡುಗಳನ್ನು ಬಿಟ್ಟು ಮಧ್ಯದ ಲೋಡಿಗೆ ಆನಿಸಿ ರಾಯರು ಕುಳಿತುಕೊಂಡಿದ್ದರು ಭವ್ಯವಾದ ದೇಹ, ಸಣ್ಣ ತಲೆ, ಚಿಕ್ಕ ಕಣ್ಣು, ದೊಡ್ಡ ಕನ್ನಡಕ ಎದ್ದು ಕಾಣುತ್ತಿದ್ದವು. ಗಂಭೀರವಾದ ಮುಖ ಮುದ್ರೆ ಯಾರಾದರೂ ಹೆದರುವಂತಿತ್ತು.

ಎದುರು ಒಂದು ಚಿಕ್ಕ ಪೆಟ್ಟಿಗೆಯ ಮೇಲೆ ಖಾತೆಯ ಪುಸ್ತಕವೊಂದನ್ನು ತೆರೆದಿಟ್ಟುಕೊಂಡ. ಯಾವುದೋ ಒಂದು ಹಳೆಯ ಲೆಕ್ಕದಲ್ಲಿ ರಾಯರು ಮಗ್ನರಾಗಿದ್ದರು. ಹೊರಗಿನಿಂದ ಆಳು ಬಂದು “ರಾಜಣ್ಣ ಬಂದಾನರೀ” ಎಂದು ಹೇಳಿ ರಾಯರ ಉತ್ತರ ಕಾದು ನಿಂತನು. ಮೂರು ದಿವಸಗಳಿಂದ ರಾಯರ ಭೆಟ್ಟಿಗೆಂದು ಬಂದು ಬಂದು ಮರಳಿ ಹೋದ ರಾಜೇಸಾಬ ಹೊರಗೆ ನಿಂತಲ್ಲಿಯೇ “ಬಂದ ಯಾಳೆ ನೆಟ್ಟಗೈತಿ” ಎಂದು ತನ್ನ ಮನಸ್ಸಿನಲ್ಲಿಯೇ ಅಂದುಕೊಂಡ. ಹಿಂದಿನ ದಿನವೆಲ್ಲ ಒಂದೊಂದು ಚಿತ್ರವಾಗಿ ಎದುರು ಹಾದು ಹೋಯಿತು. ತನ್ನ ಹೊಲ, ತನ್ನ ಮನೆ, ಎರಡೆತ್ತು. ಗೊಬ್ಬರ ಹೇರಿಕೊಂಡು ಮುಂದೆ ಮಗನು ಚಕ್ಕಡಿ ಹೊಡೆಯುತ್ತಿರಬೇಕು. ಬುತ್ತಿಗಂಟು ನೀರಿನ ಹೂಜಿ ಹೊತ್ತುಕೊಂಡು ಸೊಸೆ ಚಕ್ಕಡಿಯ ಹಿಂದೇ ನಡೆದಿರಬೇಕು. ಎಲ್ಲಕ್ಕೂ ಹಿಂದೆ ಕಂಬಳಿ ಹೆಗಲ ಮೇಲೆ ಹಾಕಿಕೊಂಡು ಕೈಲೊಂದು ಬಡಿಗೆ ಹಿಡಿದು ತಾನು ಹೊರಟಿರಬೇಕು. ಆ ಸೀಗೀ ಹುಣ್ಣಿವೆ, ಹೊಲದೊಳಗೆ ಊಟ, ಆ ಎಳೆ ಜೋಳದ ತೆನೆ, ಆ ಬೆಳಸಿ ತಿನ್ನುವ ಸುಖ-ಯಾ ಅಲ್ಲಾ-ಎಲ್ಲವನ್ನೂ ಮತ್ತೆ ಕಾಣುವೆನೆ? ಎಂದುಕೊಂಡ “ಈಗ ಕೆಲಸವಾಗದೇನಿ” ಹಿಂದಾಗಡೆ ಬಾ ಅಂತ್ಹೇಳು” ಎಂಬ ದರ್ಪದ ರಾಯರ ಮಾರುತ್ತರ ಸಂದಿಗೊಂದಿಗಳನ್ನು ನುಗ್ಗಿ ಕಿಡಿಕೆಯೊಳಗಿಂದ ಹಾದು ಹೊರಗೆ ನಿಂತ ರಾಜಣ್ಣನ ಕಿವಿಗೆ ಬಂದು ಬಡಿಯಿತು.

ಆ ರಾಜನ ಸುಖದ ಚಿತ್ರ ಕುಸಿದುಬಿತ್ತು. ಎದೆ ಸರ ... ವನ ಬಡೆದುಕೊಂಡಿತು. ಕೈಕಾಲು ನಡುಗಿ ... ನಾಲಿಗೆ ಒಣಗಿತು. ಅವನ ಬಾಯಿಂದ ಹೊರಟ “ಅರೆ ಅಲ್ಲಾ” ಎಂಬ ಒಂದೇ ಮಾತು ಗಿಡ ಮರಗಳೊಳಗಿಂದ ಹಾದು, ಗಾಳಿಯಲ್ಲಿ ಬೆರೆತು, ವಿಶಾಲವಾದ ವಿಶ್ವದಲ್ಲಿ ಕೂಡಿಕೊಂಡಿತು. ಆಳು ತಲೆ ಕೆಳಗೆ ಮಾಡಿಕೊಂಡು ಹೊರಗೆ ಬಂದ. ಪಾಪ! ಬಡವನಾದ ಅವನಿಗೂ ಕನಿಕರ ಹುಟ್ಟಿತು. ಮೂರು ದಿನದಿಂದಲೂ ಬಂದು ಬಂದು ತಿರುಗಿ ಹೋಗುತ್ತಲಿದ್ದಾನೆ. ಯಾಕೆ ಬರುತಿದ್ದಾನೆಂದಾದರೂ ಕೇಳಬಾರದೆ? ಎಂದು ಅವನಿಗನ್ನಿಸಿತ್ತು. ಅವನೂ ಅಸಹಾಯನಾಗಿದ್ದ. ಹೊಟ್ಟೆಗಾಗಿ ದುಡಿಯುವ ಆಳು “ಸೇರಿಗೆ ಸವ್ವಾಸೇರಾದರೆ” ಹೊಟ್ಟೆಗೆ ಕತ್ತರಿ. ಆಳು ಧನಿಯ ಅಪ್ಪಣೆ ತಿಳಿಸುವ ಮೊದಲೇ ರಾಜಣ್ಣ ಮಾತಾಡಿದ. “ಹೊಲದ ಸಂಬಂಧ ಮಾತಾಡಲಿಕ್ಕೆ ಅಂತ ಹೇಳಣ್ಣ” ಎಂದು ಹೇಳಿದ. ಆಳು ಮರಳಿ ಕೋಣೆಗೆ ಹೋದನು. ಸ್ವಲ್ಪ ಹೊತ್ತು ಬಿಟ್ಟು ಒಳಗಿಂದ “ಕರಿ ಹಾಂಗಾರೆ” ಎಂದು ಒಂದು ಮೋಹಕವಾದ ನುಡಿ ಬಂತು. ರಾಜೇಸಾಬ ದಿವಾಣಖಾನೆಯ ಹತ್ತಿರ ಬಾಗಿಲ ಹೊರಗೇ ಕುಳಿತಿದ್ದ; ರಾಯರು ಲೆಕ್ಕದಲ್ಲಿ ಮಗ್ನರಾಗಿಯೇ ಇದ್ದರು. ರಾಜನ ಹೃದಯದಲ್ಲಿ ಮುಗುಳೊಡೆದ ಆಶಾಕಿರಣ “ಯಾಳೆ ನೆಟ್ಟಗೈತಿ” ಎಂದು ನುಡಿಯುತ್ತಿತ್ತು. ರಾಯರು “ಕರಿ ಹಾಂಗಾರೆ” ಎಂಬ ನುಡಿ ಅವನ ಹೃದಯವನ್ನು ಹೊಕ್ಕಿ ಅರಳಿಸಿತ್ತು.

ತನ್ನ ಮುಂದಿನ ಚಿತ್ರವನ್ನು ಕಟ್ಟಹತ್ತಿದ. ಹೆಂಡತಿ, ಮಗ, ಸೊಸೆ, ಹತ್ತು ಗಂಡಾಳು, ಹತ್ತು ಹೆಣ್ಣಾಳು, ಎಲ್ಲರೂ ಕೆಲಸ ಮಾಡುತ್ತಿರುವುದು, ತಾನು ಹೊಲದ ತುದಿಯ ದಿನ್ನೆಯ ಮೇಲೆ ಬೇವಿನ ಗಿಡದ ಕೆಳಗೆ ಕಂಬಳಿ ಹಾಸಿ ಕುಳಿತು, ಚಿಲುಮೆ ಹಚ್ಚಿ ಹೊಗೆ ಎಳೆದು “ಅರೆ ಅಲ್ಲಾ” ಎಂದು ಗಡ್ಡದ ಮೇಲೆ ಕೈ ಎಳೆದು ಹೊಗೆ ಬಿಡುವನು, “ಯೇ ಬಸ್ಯಾ ಫಕೀರಾ, ಮಲ್ಲಪ್ಪಾ. ಅಲ್ಲವ್ನಾ, ಈ ಕಡೆ ಆ ಕಡೆ ಆದೇ ಆ ಮೂಲ್ಯಾಗ ತೆನಿ ಹಾಂಗೇ ಅಯ್ತಲ್ರಲೇ” ಹೀಗೆ ತನ್ನ ಭವಿಷ್ಯದ ಭಾವ ಸಮಾಧಿಯಲ್ಲಿ ಮಗ್ನನಾಗಿದ್ದ. ಒಂದು ತಂತಿಯ ನಾದ ಬಂದು ಅವನನ್ನು ಎಚ್ಚರಿಸಿತು. “ಏನಪ್ಪಾ, ರಾಜಾ ಯಾಕ ಬಂದಿ?” ಎನ್ನುತ್ತ ರಾಯರು ಹೊರಗೆ ಬಂದರು. “ನನ್ನ ಹೊಲಾ ಲಾವಣಿಗೆ ಕೊಡುತೀರ್ಯಾ!” ಇಷ್ಟು ಹೊತ್ತು ಭಾವಸಮಾಧಿಯಲ್ಲಿದ್ದ ರಾಜಾ ಒಮ್ಮೆಲೇ ನುಡಿದುಬಿಟ್ಟ. ರಾಯರು ಹುಬ್ಬುಗಂಟಿಕ್ಕಿದರು ಕಣ್ಣುಗುಡ್ಡೆ ತಾನಾಗಿಯೇ ತಿರುಗಿತು ಮೀಸೆ ಮೇಲೊಮ್ಮೆ ಕೈಸಾವರಿಸಿಕೊಂಡರು. “ಏನಲೇ ಏನ ಮಾತಾಡಲಿಕ್ಕೆ ಹತ್ತಿದ್ದಿ? ಎಲ್ಲಿದಿ ಎಂದು ಖಬರಾರ ಐತೇನು?” ಎಂದು ರಾಯರು ಮೋರೆ ಕೊಡಹಿದರು.

“ಅಲ್ರೀಯಪಾ, ಲಾವಣಿಗೆ ಕೊಟ್ರೆ ಮಾಡೋಣಾ ಅಂತಿದ್ದೆ” ಎಂದ. “ಏನಂದೀ? ಲಾವಣಿಗೆ ಕೊಡೂ ಮೊದಲೇ ನನ್ನ ಹೊಲಾ ಅಂದಿ. ಕೊಟ್ಟಮೇಲೆ ಪೂರಾ ನಿಂದೇ ಮಾಡಿಕೊಳ್ಳೋ ಗತ್ತ ಕಾಣಿಸ್ತದ. ನಡಿ ಇಲ್ಲಿಂದ ಲಾವಣಿಗೂ ಕೊಡುದಿಲ್ಲ ಸಾವಣಿಗೂ ಕೊಡುವದಿಲ್ಲ” ಎಂದೆಂದು “ಮಗ, ಲಾವಣಿ ಮಾಡಲಿಕ್ಕೆ ಬಂದಾನ ಲಾವಣಿ” ಎಂದು ಗೊಣಗುತ್ತ ಒಳಗೆ ನಡೆದುಬಿಟ್ಟರು. ರಾಜ, “ಅಯ್ಯೋ ನನ್ನ ಯಾಳೆವೆ!” ಎಂದ ಧ್ವನಿ ನಾಲಿಗೆಯ ಹೊರಗೇನು ಬಂದಿಲ್ಲ, ಅಲ್ಲಿಂದ ಕಾಲ ಕಿತ್ತಿದ. ದಾರಿಯುದ್ದಕ್ಕೂ ಅವನ ಬಾಯಿಂದ “ಅಯ್ಯೋ ನನ್ನ ಯಾಳೆವೆ!” ಎಂಬ ಮಾತು ಗಾಳಿಯಂತೆ ಹೊರಟು ಗಾಳಿಯಲ್ಲಿ ಕೂಡಿಕೊಳ್ಳುತ್ತಿತ್ತು.

ಹೋಗುವಾಗ ತನ್ನ ಹಿಂದಿನ ಕಂಗಾಲ ಚಿತ್ರಗಳೆಲ್ಲ ಒಂದೊಂದಾಗಿ ಅವನ ಕಣ್ಣಿಗೆ ಕಟ್ಟಿದವು. ಮಗನ ಮದುವೆಗಾಗಿ ರಾಯರ ಹತ್ತರ ಮೂರನೂರು ರೂಪಾಯಿ ಸಾಲ ತೆಗೆದುಕೊಂಡದ್ದು. ಮತ್ತೆ ಕೆಲವು ದಿನ ಹೋದ ಬಳಿಕ ಹೆಂಡತಿ ಜಡ್ಡಾದಾಗ ಮತ್ತೆ ನೂರು ರೂಪಾಯಿ ಸಾಲ. ಆದೆರಡೂ ಗಂಟು ಬಡ್ಡಿ ಕೂಡಿ ಆರು ನೂರು ರೂಪಾಯಿಗೆ ಮುಟ್ಟಿದ್ದು. ಆದನ್ನು ತೀರಿಸಬೇಕೆನ್ನುವಷ್ಟರಲ್ಲಿ ಭೀಕರ ಬರಗಾಲ, ಮಳೆಯಿಲ್ಲ. ಬೆಳೆಯಿಲ್ಲ. ಎತ್ತಿಗೆ ಮೇವಿಲ್ಲ. ಎತ್ತು ಚಕ್ಕಡಿ ಶಹರದೂರವರಿಗೆ ಮಾರಿದ್ದು.... ಅಯ್ಯೋ ಎಂಥ ಬರಗಾಲ! ಸೆಜ್ಜಿ ನವಣಿ ಒಣಾರೊಟ್ಟಿ ಅದೂ ಒಪ್ಪತ್ತು ಅಯ್ಯೋ ಎಂತಾ ಕಂಗಾಲ, ಎಂತಾ ಬರಗಾಲ, ಕಣ್ಣು ಕತ್ತಲೆ, ಎಲ್ಲೆಲ್ಲಿಯೂ ನೀರಿಲ್ಲ. ಒಂದು ಕೊಡಾ ನೀರಿಗಾಗಿ ಎಷ್ಟೋ ಮೈಲು ದೂರ ನದಿಗೆ ಹೋಗಬೇಕು. ಅದೂ ಕೆಲವು ದಿನ. ಕಡೆಗೆ ಅದೂ ಬತ್ತುತ್ತಾ ಬಂದಿದ್ದು ಉರಿ. ಉರಿ, ಕಷ್ಟ ತಡೆಯಲಾರದೆ ಅದೇ ಅರಳುತ್ತಿರುವ ಹೂವು ಎರಡು— ಮಗ — ಸೊಸೆ ಒಣಗುತ್ತಿರುವದನ್ನು ಕಂಡು ಮುದುಕಿ ಹೆಂಡತಿ “ಹೊಲಾ ರಾಯರಿಗೆ ಮಾರಿ ಬಿಡ್ರಿ. ಕೊಷ್ಟಷ್ಟು ರೂಪಾಯಿ ಕೊಡಲಿ” ಎಂದು ಹೇಳಿದ್ದು. ಮಗ “ಯಪ್ಪಾ ಬ್ಯಾರೆ ಊರಿಗಾರೆ ಹೋಗೋಣ” ಅಂದದ್ದು ರಾಯರು “ಈ ಬರಗಾಲದಾಗ ಹೊಲಾ ಯಾರು ಕೊಳ್ಳುತ್ತಾರೊ ಹುಚ್ಚ?” ಎಂದು ಅಂದದು ಕೊನೆಗೂ ಬಹಳ ಒತ್ತಾಯ ಮಾಡಿದ ಬಳಿಕ ಮತ್ತೆ ನೂರು ರೂಪಾಯಿ ಕೊಟ್ಟು ಮೊದಲಿನ ಗಂಟು ಬಡ್ಡಿ ಈ ಗಂಟು ಕೂಡಿ ಎಂಟು ನೂರು ರೂಪಾಯಿ ಆಯಿತೆಂದು ಹೊಲಾ ಖರೀದಿ ಬರೆಸಿಕೊಂಡದ್ದು....ಎಲ್ಲವೂ ಒಂದೊಂದಾಗಿ ಎದುರು ಕಟ್ಟಿತು. ಕಣ್ಣುಕತ್ತಲೆ ಬಂತು. ಬೀದಿಯ ತುಂಬೆಲ್ಲ ಎಡವುತ್ತ ತಡವುತ್ತ ಮನೆಗೆ ಬಂದು ಮುಟ್ಟಿದ. ಒಂದೇ ಉಸುರಿಗೆ “ಯಾ ಅಲ್ಲಾ” ಎಂದು ಕಪ್ಪಳಿಸಿ ಕುಳಿತುಬಿಟ್ಟ.

ಹೆಂಡತಿ, ಮಗ, ಸೊಸೆ, ಎಲ್ಲರೂ ಹೊರಗೆಬಂದು ನೋಡಿದರು. ಕುಡಿಯಲು ನೀರು ತಂದು ಕೊಟ್ಟರು. ಹಾಗೆಯೇ ದಣಿದವನಂತೆ ನಿದ್ದೆಹೋದ. ಸಂಜೆ ಎದ್ದ ಬಳಿಕ ಏನಾಯಿತೆಂದು ಹೆಂಡತಿ ಕೇಳಿದಾಗ, “ಏನಿಲ್ಲ ಎಂತಾ ಕೆಟ್ಟ ಯಾಳೆ ಬಂತು” ಎಂದಂದ. ಅವಳಿಗೂ ಒಂದೂ ಅರ್ಥವಾಗಲಿಲ್ಲ. ನಡೆದ ವಿಷಯವೂ ಗೊತ್ತಿರಲಿಲ್ಲ. “ಊರಿಗೆ ಬಂದೈತಿ ಕೆಟ್ಟ ಯಾಳೆ” ಎಂದಂದು ಅಡಿಗೆ ಮಾಡಲು ಹೋಗಿಬಿಟ್ಟಳು. ರಾತ್ರಿಯೆಲ್ಲವೂ ಒಂದೇ ವಿಚಾರ “ಮುತ್ತಿನಂತಾ ಹೊಲಾ ಎಂತಾ ಕೆಟ್ಟ ಯಾಳೆ ಬಂತು” ಎಂದಂದು ಉಸಿರು ಬಿಡುತ್ತ ಕಾಲ ಕಳೆದ. ಸರಿಯಾಗಿ ಊಟವೂ ಮಾಡಿಲ್ಲ. ನಿದ್ರೆಯೂ ಮಾಡಿಲ್ಲ. ಅಂತೂ ಅಂದಿನ ರಾತ್ರಿ ಹಾಗೆಯೆ ಉಸಿರು ಬಿಡುತ್ತ ಕಳೆದನು.

ರಾಜಾಸಾಬ ಹೆಸರಿಗೆ ತಕ್ಕಂತೆ ರಾಜನೇ ಆಗಿದ್ದ. ಊರಿಗೆಲ್ಲರಿಗೂ ಬೇಕಾದ ಮನುಷ್ಯ. ಎಲ್ಲರೊಡನೂ ಚೆನ್ನಾಗಿ, ಎಲ್ಲರೊಡನೆಯೂ ಸೊಗಸಾಗಿದ್ದ. ಯಾರು ಏನಂದರೂ ಬಿರುಸು ನುಡಿಯಿಲ್ಲ, ಒರಟು ಉತ್ತರವಿಲ್ಲ. ಊರಲ್ಲಿ ಯಾರಾದರೂ ತಂಟೆ ತಕರಾರು ಮಾಡಿದರೆ ಗೌಡರ ಮನೆತನಕ ಹೋಗುವ ಆಗತ್ಯವಿಲ್ಲ. ಕಪ್ಪಲಿ ಭಾವಿ ಕಟ್ಟೆ ಮೇಲೆಯೆ ಪಂಚಾಯತಿ ಸಿಕಾಲಿ. ರಾಜಣ್ಣ ಹೇಳಿದ್ದೇ ತೀರ್ಮಾನ ಅವನಿಗೆ ಒಪ್ಪುವಂತೆ ಹೆಂಡತಿಯೂ ಇದ್ದಳು ಮಗ ಸ್ವಲ್ಪ ಸಿಡುಕು ಸ್ವಭಾವದವ; ಅಭಿಮಾನ ಸ್ವಲ್ಪ ಹೆಚ್ಚು. ಸೊಸೆ ಮೊನ್ನೆ ಮೊನ್ನೆ ಮನೆಗೆ ಬಂದವಳು.

ನಮ್ಮದು ಪರರ ಪಾಲಾಗಿ ಪರರ ಸೊತ್ತಾಗಿ ಪರರು ಭೋಗಿಸುತ್ತ ಪರರು ಆಳುತ್ತಿದ್ದರೂ “ನಮ್ಮದು” ಎಂಬ ಅಭಿಮಾನ ಜ್ಯೋತಿ ಜನರಲ್ಲಿ ನಂದುವದಿಲ್ಲ. ಈ ಮಾತು ಪ್ರತಿಯೊಂದು ವಸ್ತುವಿಗೂ ಅನ್ವಯಿಸುತ್ತಿದೆ. ಭೂಮಿಯಿಂದ, ಊರಿಂದ, ನಾಡಿನಿಂದ, ದೇಶದ ವರೆಗೆ ಎಲ್ಲೆಲ್ಲಿಯೂ ಪ್ರತಿಧ್ವನಿ ಗೊಡುತ್ತಿದೆ. ತನ್ನದು, ತಮ್ಮದು, ನಮ್ಮದು ಎನ್ನುವದರಲ್ಲಿ ಮನುಷ್ಯನಿಗೆ ಒಂದು ಸ್ವಾತಂತ್ರ್ಯ, ಮಾನಸಿಕ ಶಾಂತಿ ಕಾಣುತ್ತಿದೆ. ಆದರೆ ನಮ್ಮ ಬದುಕು ನಮ್ಮದಾಗಿಯೇ ಇದ್ದರೆ! ಎಷ್ಟು ಸ್ವತಂತ್ರವಾಗಿ ಬಾಳಬಹುದು ಎಂಬುದು ಕಲ್ಪನಾತೀತವಾಗಿದೆ. ಕಲ್ಪನಾಲೋಕದಲ್ಲಿ ತೇಲುವಾಗ ಹಿಂದುಮುಂದಿನದನ್ನು ಮರೆತು “ತನ್ನದು” ಎಂದವರಲ್ಲಿ ರಾಜೇಸಾಹೇಬನೊಬ್ಬ. “ತನ್ನ” ಎನ್ನುವ ಒಂದೇ ಮಾತು ಅವನ ಆಶೆಯನ್ನೆಲ್ಲ ಮಣ್ಣುಮಾಡಿತು. ಮುಂದೆ ಏನು ಹೇಳಿದರೂ ಯಾರು ಹೇಳಿದರೂ ಎಷ್ಟು ಕಾಡಿ ಬೇಡಿದರೂ ರಾಜನಿಗೆ ರಾಯರು ಹೊಲವನ್ನು ಲಾವಣಿಗೆ ಕೊಡಲು ಒಪ್ಪಲಿಲ್ಲ. ಈ ಸುದ್ದಿ ಊರಿಗೆಲ್ಲ ಗೊತ್ತಾಯಿತು. ಜನರೆಲ್ಲ ಮರುಗಿದರು. ಈಗ “ಅಯ್ಯೋ ಪಾಪ ಅವನ ಬಾಳು” ಎನ್ನಿಸುತ್ತಿದೆ.

ಭವಿಷ್ಯ

ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ



# ಫೆಬ್ರುವರಿ ೨೫ ರಿಂದ ಮಾರ್ಚ ೩ರ ವರೆಗೆ

### ಮೇಷ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಉತ್ತಮ. ಎಲ್ಲ ಕೆಲಸದಲ್ಲಿ ಸ್ತ್ರೀ ಸಂತತಿಯಿಂದ ಒಮ್ಮನಸ್ಸಿನ ಸಹಾಯ ದೊರೆಯುವದು. ಆದರೆ ಆಪ್ತರಲ್ಲಿ ಒಬ್ಬರ ಏಳಿಗೆಯಿಂದ ನಿಮಗೆ ನಾಚಿಕೆ ಎನಿಸಿ ತಾಳ್ಮೆಗೆಡುವ ಪ್ರಸಂಗ! ಆಪ್ತರು, ನೆರೆಹೊರೆಯವರಲ್ಲಿ ಒಬ್ಬರ ನಷ್ಟಾಂಶದಿಂದ ಅವರ ಆಸ್ತಿಗೆ ಹಕ್ಕು ಹೇಳಿಕೊಳ್ಳುವ ಹುಚ್ಚುತನದ ಪ್ರಯತ್ನ. ಉದ್ಯೋಗದಲ್ಲಿ ಪ್ರಗತಿ ಉತ್ತಮ, ಪ್ರತಿಷ್ಠೆ ಸಾಧಾರಣ ಆದರೆ ಲಾಭ ಬೇಕಾದಷ್ಟು ಮಿತ್ರ ಸುಖ ಉತ್ತಮ. ಸಮೀಪದ ಪ್ರವಾಸ ತ್ರಾಸದ್ದು ದೂರದ ಪ್ರವಾಸ ಹಿತಕರ. ವಾದ ಸ್ಪರ್ಧೆಗಳಲ್ಲಿ ಯಶ ಇಲ್ಲದೆ ಹೋದರೆ ಸಮಾನ ಸ್ಥಿತಿ. ಭೆಟ್ಟಿಗಿಂತ ಪತ್ರವ್ಯವಹಾರ ಹೆಚ್ಚು ನೆಟ್ಟಗೆ. ಅಶ್ವಿನಿಯ ಕೊನೆಯ ೨ ಮತ್ತು ಭರಣಿಯ ಮೊದಲಿನ ೨ ಚರಣಗಳಿಗೆ ಹೆಚ್ಚು ನೆಟ್ಟಗೆ. ತಾ. ೨೬, ೨೭ ೨, ಮತ್ತು ೩ ನೆಟ್ಟಗೆ.

### ವೃಷಭ

ಪ್ರಕೃತಿ ನೆಟ್ಟಗೆ, ಸ್ತ್ರೀ ಸುಖ ಉತ್ತಮ ಆದರೆ ಪ್ರಾಪಂಚಿಕ ತ್ರಾಸ ಹೆಚ್ಚುವದು. ಆದರೂ ಕುಟುಂಬದ ದೃಷ್ಟಿಯಿಂದ ಹಿತಕರವಾದ ಸಂಗತಿದೊಂದು ನಿಶ್ಚಯವಾಗಿ ಸಂಭವಿಸುವ ಯೋಗ. ಉದ್ಯೋಗದಲ್ಲಿ ಯಶಸ್ವಿ ಸಾಹಸದಿಂದ ಪ್ರಗತಿ ಹೆಚ್ಚಾಗಿ ಪ್ರತಿಷ್ಠೆ ಬೇಕಾದಷ್ಟು ದೊರೆತರೂ ಪ್ರತ್ಯಕ್ಷ ಲಾಭ ದೊರೆಯುವ ಯೋಗ ಕಡಿಮೆ. ಮಿತ್ರರು ಮನಸ್ಸಿಗೆ ಹತ್ತುವಂಥ ಕೆಲಸ ನಡೆಸುವರು. ವಾದ ಸ್ಪರ್ಧೆಗಳಲ್ಲಿ ಶತ್ರುಗಳ ಶಕ್ತಿಯು ಹೆಚ್ಚುವದು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ನೆಟ್ಟಗೆ. ಕೃತ್ತಿಕೆಯ ಕೊನೆಯ ೨ ಮತ್ತು ರೋಹಿಣಿಯ ಮೊದಲಿನ ಎರಡು ಚರಣಗಳಿಗೆ ತ್ರಾಸ ಕಡಿಮೆ. ತಾ. ೨೫, ೨ ಮತ್ತು ೩ ನೆಟ್ಟಗೆ.

### ಮಿಥುನ

ಪ್ರಕೃತಿ ಉತ್ತಮ. ಸ್ತ್ರೀ ಸುಖ ನೆಟ್ಟಗೆ. ಆದರೆ ಇತರ ಪ್ರಾಪಂಚಿಕ ಸುಖ ಬಹಳ ಕಡಿಮೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆಗಳು ಉತ್ತಮ ಸ್ವಲ್ಪ ವಿಲಂಬವಾದರೂ ಅಂದಾಜಿನಷ್ಟು ದ್ರವ್ಯ ಲಾಭ. ವಾದ ಸ್ಪರ್ಧೆಗಳಲ್ಲಿ ಶತ್ರುಗಳು ಬಹಳ ತ್ರಾಸಕೊಟ್ಟರೂ ಕೊನೆಗೆ ಯಶ. ಸಂತತಿಗೆ ಉನ್ನತಿ. ಮಿತ್ರರಿಂದ ಯೋಗ್ಯ ಸಲಹೆ. ಭೆಟ್ಟಿಗಿಂಡ ಪ್ರವಾಸ, ಪತ್ರವ್ಯವಹಾರ ನೆಟ್ಟಗೆ ಆರ್ದ್ರಾದ ಕೊನೆಯ ೨ ಮತ್ತು ಪುನರ್ವಸೂದ ಮೊದಲಿನ ೨ ಚರಣಗಳಿಗೆ ತ್ರಾಸದಿಂದ ಯಶಸ್ಸು. ತಾ. ೨೬, ೨೭ ಮತ್ತು ೩ ನೆಟ್ಟಗೆ.

### ಕರ್ಕ

ನಿಮ್ಮ ಪ್ರಕೃತಿ ನೆಟ್ಟಗೆ. ಹೆಂಡತಿಗೆ ಅಲ್ಪ ಸ್ವಲ್ಪ ಕ್ಲೇಶ. ಇಬ್ಬರಲ್ಲಿ ವಾದ ಹುಟ್ಟುವಂಥ ಮತಭೇದ. ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ, ಲಾಭಗಳು ಅಷ್ಟಕ್ಕಷ್ಟೆ ಆದರೂ ಆಕಸ್ಮಿಕವಾಗಿ ಅಲ್ಪ ಲಾಭವಾಗುವ ಸಂಭವ. ವಾದ ಸ್ಪರ್ಧೆಗಳಲ್ಲಿ ಬಹಳ ಹಿಮ್ಮೆಟ್ಟುವಿಕೆ. ನಿಮ್ಮ ಜನರೆ ಒಡೆದು ಒಡೆದು ಶತ್ರುಗಳನ್ನು ಕೂಡಿಕೊಳ್ಳುವರು. ಪ್ರವಾಸವು ಉತ್ತಮ. ಆದರೆ ಭೆಟ್ಟಿ ಪತ್ರವ್ಯವಹಾರಗಳು ಬಹಳ ತ್ರಾಸದ್ದು. ಪುಷ್ಯಾದ ಕೊನೆಯ ೨ ಮತ್ತು ಆಶ್ಲೇಷಾದ ಮೊದಲಿನ ೨ ಚರಣಗಳಿಗೆ ತ್ರಾಸ ಕಡಿಮೆ. ತಾ. ೨೭, ೨೮ ಮತ್ತು ೧ ನೆಟ್ಟಗೆ.

### ಸಿಂಹ

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮ. ಪ್ರಾಪಂಚಿಕ ಸುಖ ಸಾಧಾರಣ. ಸಂತತಿಯಿಂದ ಅನ್ಯವಹಾರ್ಯ ವರ್ತನೆ. ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ, ಲಾಭಗಳು ಸಾಕಷ್ಟಿದ್ದರೂ ಸ್ಥಾವರದಲ್ಲಿ ಸ್ವಲ್ಪ ತೊಂದರೆ ಉಂಟಾಗುವ ಹೆದರಿಕೆ. ವಾದಸ್ಪರ್ಧೆಯಲ್ಲಿ ಒಳ್ಳೆ ಯಶ. ಪ್ರವಾಸಕ್ಕಿಂತ ಭೆಟ್ಟಿ ಪತ್ರವ್ಯವಹಾರ ಹೆಚ್ಚು ನೆಟ್ಟಗೆ. ಮಘಾದ ಕೊನೆಯ ೨ ಮತ್ತು ಪೂರ್ವಾದ ಮೊದಲಿನ ಎರಡು ಚರಣಗಳಿಗೆ ತ್ರಾಸ ಕಡಿಮೆ. ತಾ. ೨೬, ೨೭,೨ ಮತ್ತು ೩ ನೆಟ್ಟಗೆ.

### ಕನ್ಯಾ

ಪ್ರಕೃತಿ ಸಾಧಾರಣ. ಸ್ತ್ರೀ ಸುಖದಲ್ಲಿಯೂ ಸ್ವಲ್ಪ ತೊಂದರೆ ರತಿ ಸುಖ ಸ್ವಲ್ಪ ಕಡಿಮೆಯಾದರೂ ಇತರ ವಿಷಯದಲ್ಲಿ ಮತ್ತೈಕ್ಯ. ಉದ್ಯೋಗದಲ್ಲಿ ಲಾಭ ಸಾಧಾರಣವಾದರೂ ಪ್ರಗತಿ ಮತ್ತು ಪ್ರತಿಷ್ಠೆ ಬಹಳ ಕಡಿಮೆ. ಉದ್ಯೋಗಿಗಳಿಗಿಂತ ನೌಕರದಾರರಿಗೆ ಸ್ವಲ್ಪ ನೆಟ್ಟಗೆ ವಾದ ಸ್ಪರ್ಧೆಗಳಲ್ಲಿ ಸಮಾನ ಸ್ಥಿತಿ. ಸ್ಥಾವರದಲ್ಲಿ ಹೆಚ್ಚಳ. ನಗದಿನಲ್ಲಿ ಹಾನಿಯಾಗುವ ಹೆದರಿಕೆ ಪ್ರವಾಸಾದಿ ಕೆಲಸಗಳು ಬಹಳ ಕಷ್ಟದ್ದು. ಉತ್ತರೆಯ ಕೊನೆಯ ೨ ಮತ್ತು ಹಸ್ತಾದ ಮೊದಲಿನ ೨ ಚರಣಗಳಿಗೆ ತ್ರಾಸ ಕಡಿಮೆ. ತಾ. ೨೫, ೨೮ ಮತ್ತು ೧ ನೆಟ್ಟಗೆ.

### ತುಲಾ

ಪ್ರಕೃತಿ ಉತ್ತಮ. ಸ್ತ್ರೀ ಸುಖ ನೆಟ್ಟಗೆ. ಆದರೆ ಇತರ ಪ್ರಾಪಂಚಿಕ ತ್ರಾಸ ಸ್ವಲ್ಪ. ಪ್ರಯಾಣದಲ್ಲಿ ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ, ಲಾಭಗಳು ಉತ್ತಮ. ಸಂಗ್ರಹವನ್ನು ಹೆಚ್ಚಿಸಬೇಕೆಂಬ ವಿಚಾರ ಬಂದರೂ ಇಲ್ಲಿ ಯಾವ ಸಂಗ್ರಹವನ್ನು ಹೆಚ್ಚಿಸಬೇಕೆಂಬ ಬಗ್ಗೆ ಇತರರೊಡನೆ ಬಹಳ ಮತಭೇದ. ಮಿತ್ರ ಸುಖ ಉತ್ತಮ. ಮನರಂಜನೆಯ ಕಾರ್ಯಕ್ರಮಗಳು ಮೇಲಿಂದ ಮೇಲೆ ನಡೆಯುವವು. ವಾದದಲ್ಲಿ ಅಥವಾ ಸ್ಪರ್ಧೆಯಲ್ಲಿ ಯಶಸ್ಸು. ಪ್ರವಾಸಾದಿ ಕೆಲಸಗಳು ಹಿತಕರ. ಸ್ವಾತಿಯ ಕೊನೆಯ ೨ ಮತ್ತು ವಿಶಾಖಾದ ಮೊದಲಿನ ಎರಡು ಚರಣಗಳಿಗೆ ತ್ರಾಸದಿಂದ ಯಶಸ್ಸು. ತಾ. ೨೫, ೨೬, ೨೭ ಮತ್ತು ೩ ನೆಟ್ಟಗೆ.

### ವೃಶ್ಚಿಕ

ಪ್ರಕೃತಿ ಸಾಧಾರಣ. ಸ್ತ್ರೀ ಸುಖ ನೆಟ್ಟಗೆ. ಸಂತತಿ ಮತ್ತು ಇತರರಿಂದ ಬಹಳ ತ್ರಾಸ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಉತ್ತಮ. ಆದರೆ ಲಾಭ ಸಾಧಾರಣ. ಆದರೆ ಮುಂದಿನ ಆಶೆಯು ಹೆಚ್ಚಾಗಿದೆ ವಾದ ಸ್ಪರ್ಧೆಗಳಲ್ಲಿ ಅನುಕೂಲತೆ ಇದ್ದರೂ ವಿಶೇಷವಾಗಿ ವೆಚ್ಚ ಮತ್ತು ತ್ರಾಸ ಸಂಭವಿಸುವದು. ಪ್ರವಾಸಾದಿ ಕೆಲಸಗಳು ನೆಟ್ಟಗೆ. ಅನುರಾಧಾದ ಕೊನೆಯ ೨ ಮತ್ತು ಜ್ಯೇಷ್ಠಾದ ಮೊದಲಿನ ಎರಡು ಚರಣಗಳಿಗೆ ತ್ರಾಸ ಕಡಿಮೆ. ತಾ. ೨೫, ೨೬ ಮತ್ತು ೨೭ ನೆಟ್ಟಗೆ.

### ಧನು

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಆದರೆ ಹೆಂಡತಿಯು ತವರಮನೆಯವರೊಂದಿಗೆ ವಿಶೇಷ ವಿರೋಧ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಲಾಭಗಳು ಉತ್ತಮ. ಆದರೆ ಹೆಚ್ಚಿಗೆ ವೆಚ್ಚ. ವಾದ ಸ್ಪರ್ಧೆಗಳಲ್ಲಿ ಒಳ್ಳೆ ಯಶಸ್ಸು ದೊರೆತರೂ ಶತ್ರುಗಳಿಂದ ಗುಪ್ತ ತ್ರಾಸ ಹೆಚ್ಚು. ಭೆಟ್ಟಿಗಿಂತ ಪ್ರವಾಸ ಪತ್ರವ್ಯವಹಾರ ಹೆಚ್ಚು ನೆಟ್ಟಗೆ. ಮೂಲಾದ ಕೊನೆಯ ೨ ಮತ್ತು ಪೂರ್ವಾಷಾಢಾದ ಮೊದಲಿನ ೨ ಚರಣಗಳಿಗೆ ಹೆಚ್ಚು ನೆಟ್ಟಗೆ. ತಾ. ೨೬, ೨೭, ೨ ಮತ್ತು ೩ ನೆಟ್ಟಗೆ.

### ಮಕರ

ಪ್ರಕೃತಿ ಬಹಳ ತ್ರಾಸ. ಇತರ ವಿಷಯಗಳಲ್ಲಿ ಪ್ರಾಪಂಚಿಕ ಸುಖ ನೆಟ್ಟಗೆ. ಸ್ತ್ರೀ ಸುಖ ಬಹಳ ನೆಟ್ಟಗೆ ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆಗಳು ಚೆನ್ನಾಗಿದ್ದರೂ ಲಾಭ ಬಹಳ ಕಡಿಮೆ. ವಾದದಲ್ಲಿ ಸ್ಪರ್ಧೆಯಲ್ಲಿ ಉತ್ತಮ ಯಶ. ಸಂತತಿಗೆ ಏಳಿಗೆ. ಮಿತ್ರರ ತ್ರಾಸು ಹೆಚ್ಚುವದು. ಪ್ರವಾಸಾದಿ ಕೆಲಸಗಳು ನೆಟ್ಟಗೆ. ಉತ್ತರಾಷಾಢಾದ ಕೊನೆಯ ೨ ಮತ್ತು ಶ್ರವಣಾದ ಮೊದಲಿನ ೨ ಚರಣಗಳಿಗೆ ತ್ರಾಸ ಕಡಿಮೆ. ತಾ. ೨೮, ೧, ೨ ಮತ್ತು ೩ ನೆಟ್ಟಗೆ.

### ಕುಂಭ

ನಿಮ್ಮ ಮತ್ತು ಸ್ತ್ರೀಯ ಪ್ರಕೃತಿ ನೆಟ್ಟಗೆ. ಆದರೆ ಸಂತತಿ ಕ್ಲೇಶ. ಆಸ್ತಿಯಲ್ಲಿ ಬಹಳ ಹೆಚ್ಚಳ, ಉದ್ಯೋಗದಲ್ಲಿ ಪ್ರಗತಿ ಲಾಭ ಚೆನ್ನಾಗಿದ್ದರೂ ಪ್ರತಿಷ್ಠೆಯಲ್ಲಿ ಗೌಣ ಪ್ರಕಾರ ವಾದ ಸ್ಪರ್ಧೆಗಳಲ್ಲಿ ಸಾಮಾನ್ಯ ಯಶಸ್ಸು. ಮಿತ್ರ ಸುಖ ಉತ್ತಮ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ನೆಟ್ಟಗೆ, ಶತತಾರಿಕೆಯ ಕೊನೆಯ ೨ ಪೂರ್ವಾಭಾದ್ರಪದದ ಮೊದಲಿನ ೨ ಚರಣಗಳಿಗೆ ತ್ರಾಸದಿಂದ ಯಶಸ್ಸು. ತಾ. ೨೫, ೨೭, ೨ ಮತ್ತು ೩ ನೆಟ್ಟಗೆ.

### ಮೀನ

ಪ್ರಕೃತಿಗೆ ಸಾಧಾರಣ- ಸ್ತ್ರೀ ಸುಖದಲ್ಲಿ ವಿರಸ. ಪ್ರಾಪಂಚಿಕ ಸುಖವೂ ಅಷ್ಟಕ್ಕಷ್ಟೆ. ಆಪ್ತರಿಂದ ವಿಶೇಷ ತ್ರಾಸ. ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ ಕಡಿಮೆ. ಆದರೆ ಲಾಭ ನೆಟ್ಟಗೆ. ಅಂದಾಜಿಗಿಂತ ಹೆಚ್ಚಿಗೆ ವೆಚ್ಚ ವಾದ ಸ್ಪರ್ಧೆಗಳಲ್ಲಿ ಹಿಮ್ಮೆಟ್ಟುವಿಕೆ. ಪತ್ರವ್ಯವಹಾರಕ್ಕಿಂತ ಪ್ರವಾಸ ಭೆಟ್ಟಿಗಳು ನೆಟ್ಟಗೆ. ಉತ್ತರಾಭಾದ್ರಪದದ ಕೊನೆಯ ೨ ರೇವತಿಯ ಮೊದಲಿನ ೨ ಚರಣಗಳಿಗೆ ತ್ರಾಸು ಹೆಚ್ಚು. ತಾ. ೨೬, ೨೭, ೨೮ ಮತ್ತು ೧ ನೆಟ್ಟಗೆ.

## ಚಿಕ್ಕ ರಾಷ್ಟ್ರಗಳ ಗೋಳು

(೧ನೇ ಪುಟದಿಂದ ಮುಂದರಿದುದು)

ಸಮಾಧಾನವಿತ್ತು ಪಾರಾಗಬಯಸಿದರು. ಆದರಲ್ಲಿ ಯಶಸ್ವಿಗಳೂ ಆದರು.

ಹೀಗೆ ಈ ನಾಲ್ಕೂ ನ್ಯಾಯಗಳಲ್ಲಿ ಒಂದಲ್ಲ ಒಂದು ಪ್ರಬಲ ರಾಷ್ಟ್ರದ ಪಾಲು ಇತ್ತೆಂಬುದೇ ಸಾಕಷ್ಟು ನಿರಾಶಾಜನಕವಾದ ಸಂಗತಿ. ಏಕೆಂದರೆ ಜಗತ್ತನ್ನು ಉದ್ಧರಿಸುವ ಹೊಣೆ ಹೊತ್ತವರೆಂದು ಈ ಪ್ರಬಲ ರಾಷ್ಟ್ರಗಳು ಭದ್ರತಾಮಂಡಲದಲ್ಲಿ ೫ ಶಾಶ್ವತ ಸ್ಥಾನಗಳನ್ನು ಗಳಿಸಿಕೊಂಡಿವೆ. ಮಾತ್ರವಲ್ಲ, ಅಲ್ಲಿ ಬರುವ ಪ್ರಶ್ನೆಗಳ ವಿಷಯದಲ್ಲಿ "ಕರ್ತುಮಕರ್ತುಮನ್ಯಥಾ ಕರ್ತುಂ ಶರಣ" ವಾದ ವಿಶೇಷಾಧಿಕಾರವನ್ನು ಪಡೆದಿವೆ. ಅವುಗಳೇ ಪ್ರಮುಖ ಆಕ್ರಮಣಶೀಲ ರಾಷ್ಟ್ರಗಳೆಂದು ಈ ದೂರುಗಳಿಂದ ಸಿದ್ಧವಾದುದರ ಮೂಲಕ ಕಳ್ಳನ ಕೈಲಿ ಗಂಟು ಕೊಟ್ಟಂತೆ ಜಗತ್ತು ಅವರ ಕೈಲಿ ಅಧಿಕಾರವಿತ್ತಿದೆ. ಆದರೆ ಅದಕ್ಕಿಂತಲೂ ಉದ್ವೇಗಜನಕ ವಿಷಯವೆಂದರೆ, ಮೊದಲಿನೆರಡು ವಿಷಯಗಳು ಇದ್ದಕ್ಕಿದ್ದಂತೆ ಮುಚ್ಚಿಡಲ್ಪಟ್ಟವಾದರೆ ಉಳಿದೆರಡು ವಿಷಯಗಳಲ್ಲಿ ಸಂತ್ರಸ್ತರ "ತ್ರಾಹಿ ತ್ರಾಹಿ"ಗೆ ಭದ್ರತಾಮಂಡಲದಿಂದ ಸ್ಪಷ್ಟವಾದ ನಕಾರಾತ್ಮಕಉತ್ತರದೊರೆಯಿತು. ಇಂಡೋನೇಶಿಯಾದ ಸಂಬಂಧದಲ್ಲಿ ಯುಕ್ರೇನಿಯಾದ ಗೊತ್ತುವಳಿಗೆ ಬರಿ ೨ ಮತಗಳು ಮಾತ್ರ ಬಿದ್ದವು. ಸಿರಿಯಾ-ಲೆಬನಾನಗಳ ಪ್ರಶ್ನೆಯಲ್ಲಿಯೂ ರಶಿಯಾ-ಯುಕ್ರೇನುಗಳು ಮಾತ್ರ ಆ ಬಡಪಾಯಿಗಳ ಸಹಾಯಕ್ಕೆ ಬಂದವು. ಇದರಿಂದ ಭದ್ರತಾಮಂಡಲದಲ್ಲಿ ಚಿಕ್ಕ ರಾಷ್ಟ್ರಗಳು ನ್ಯಾಯವನ್ನು ಅಪೇಕ್ಷಿಸುವದು ವ್ಯರ್ಥವೆಂದಿಷ್ಟೇ ಸಿದ್ಧವಾಗದೆ, ಭದ್ರತಾಮಂಡಲದಲ್ಲಿ ಸ್ಥಾನಪಡೆದ ೬ ಚಿಕ್ಕ ರಾಷ್ಟ್ರಗಳು ತಮ್ಮಂತೆ ಬಡಪಾಯಿಗಳಾದವರ ಕಡೆ ಜಗ್ಗುವದನ್ನು ಬಿಟ್ಟು ಒಂದೊಂದು ಹಿರಿ ರಾಷ್ಟ್ರದ ಸೆರಗಿನ ತುದಿಗೆ ಜೋತು ಬೀಳುತ್ತಿವೆಯೆಂದೂ ಸ್ಪಷ್ಟವಾಯಿತು.

### ಅಮೇರಿಕನ್ ಧೋರಣ

ಅಮೇರಿಕನ್ ಧೋರಣದ ನಿಸ್ಸತ್ವತೆಯೂ ಇಲ್ಲಿ ಉಲ್ಲೇಖಾರ್ಹವಾಗಿದೆ. ಗ್ರೀಸದಲ್ಲಿ ಬ್ರಿಟಿಶ ಚಂಚುಪ್ರವೇಶವಾದಾಗ ಅಮೇರಿಕನ್ ವಿದೇಶ ಖಾತೆ ಬ್ರಿಟಿಶ ಧೋರಣೆಯನ್ನು ಒಪ್ಪದೆ ಹೇಳಿಕೆಯೊಂದನ್ನು ಹೊರಡಿಸಿತ್ತು. ಇಂಡೋನೇಶಿಯಾ ಇಂಡೋಚೀನಗಳ ರಾಷ್ಟ್ರೀಯರ ವಿರುದ್ಧ ಕಡ ಒತ್ತೆಯ ಆಯುಧಗಳನ್ನುಪಯೋಗಿಸುವದಾದರೆ ಅದರಿಂದ ಅಮೇರಿಕನ್ ಗುರುತನ್ನು ಅಳಿಸಬೇಕೆಂದು ಕೇಳಿ ವಸಾಹತು ಪ್ರಜೆಗಳ ಆಕಾಂಕ್ಷೆಯಲ್ಲಿ ಅದು ಸಹಾನುಭೂತಿಯನ್ನು ವ್ಯಕ್ತಪಡಿಸಿತು. ಆದರೆ ಭದ್ರತಾ ಮಂಡಲದಲ್ಲಿ ಆದರ ಬೇರೆಯೆ ಅವತಾರವನ್ನು ಕಾಣುತ್ತೇವೆ. ಒಂದಲ್ಲ ಒಂದು ನೆವ ಹಿಡಿದು ಅದು ಗ್ರೀಕ, ಇಂಡೋನೇಶಿಯಾ, ಸೀರಿಯಾ, ಲೆಬನಾನಗಳ ವಿಷಯದಲ್ಲಿ ಪೀಡಿತರ ಪಕ್ಷ ಸೇರದೆ ಕರ್ತವ್ಯಚ್ಯುತವಾಯಿತು. ಅಧ್ಯಕ್ಷ ಟ್ರೂಮನ್ನರ ಕೈಕೆಳಗೆ ಅಮೇರಿಕೆ ಸ್ವಲ್ಪಸ್ವಲ್ಪವಾಗಿ ಬ್ರಿಟಿಶ ಕಾರಸ್ಥಾನಗಳಿಗೆ ಬೆಂಬಲ ಕೊಡುತ್ತ ಬರುವಂತೆ ತೋರುವದಿಲ್ಲವೆ? ಈ ಪೀಡಿತರ ಪರವಾಗಿ ಮತವನ್ನು ಕೊಡುವಷ್ಟು ಔದಾರ್ಯ ಅದಕ್ಕೇಕೆ ಬರಲಿಲ್ಲ.

ಅಮೇರಿಕನ್ ಧೋರಣೆಯಲ್ಲಿ ಈ ಪರಿವರ್ತನವೇಕೆ? ಯುರೋಪಿನಲ್ಲಿ ಬೆಳೆಯುತ್ತಿರುವ ರಶಿಯನ್ ಪ್ರಭಾವಕ್ಕೆ ಅಂಜಿ ಅದು ಬ್ರಿಟಿಶ ಕುದುರೆಗೆ ತನ್ನ ಗಾಡಿಯನ್ನು ಕಟ್ಟಿತೆ? ಫ್ರಾನ್ಸದಲ್ಲಿ ಸಾಮ್ರಾಜ್ಯವಾದಿ ಡಿಗಾಲೆಯ ಅಸ್ತಮಾನವಾದುದು ಕಮ್ಯುನಿಸ್ಟ ಶಕ್ತಿಯ ದ್ಯೋತಕವೇ ಸರಿ. ಇದರಿಂದ ಬ್ರಿಟಿಶರು ಭಯಗೊಂಡಿದ್ದಾರೆ. ಕಮ್ಯುನಿಸ್ಟ ಮುಂದಾಳ್ತನದಲ್ಲಿರುವ ಅಲ್ಬೇನಿಯಾಕ್ಕೆ ಯುಕ್ತರಾಷ್ಟ್ರಗಳಲ್ಲಿ ಪ್ರವೇಶವೀಯಬಾರದೆಂದು ಗ್ರೀಸು ಯುಕ್ತರಾಷ್ಟ್ರ ಸಭೆಯಲ್ಲಿ ಆಕ್ಷೇಪವೆತ್ತಿತು. ಅಲ್ಬೇನಿಯಾಕ್ಕೆ ಪ್ರವೇಶವಿತ್ತರೆ ರಶಿಯಾಕ್ಕೆ ಒಂದು ಮತ ಹೆಚ್ಚು ದೊರೆಯುವದೆಂದು ಹೆದರಿದ ಬ್ರಿಟಶರೇ ಈ ಆಕ್ಷೇಪದ ಉತ್ತೇಜಕರಾಗಿರಲಿಕ್ಕಿಲ್ಲವೆ? ಮೇಲಾಗಿ ಅಲ್ಬೇನಿಯಾಕ್ಕೆ ಪ್ರವೇಶವಿತ್ತು, ಈಗಾಗಲೆ ಯುಗೋಸ್ಲಾವಿಯಾ ರಶಿಯನ್ ಪಕ್ಷ ಸೇರಿದ್ದರಿಂದ ಭೂಮಧ್ಯ ಸಮುದ್ರದಲ್ಲಿ ರಶಿಯಾಕ್ಕೆ ಸಿಕ್ಕಿದ ಪ್ರಭಾವವನ್ನು ಇನ್ನಷ್ಟು ಬೆಳೆಸಲು ಬ್ರಿಟಶರು ಅಪೇಕ್ಷಿಸುವದಿಲ್ಲ. ಗ್ರೀಸದ ವಿಷಯದಲ್ಲಿ ಬ್ರಿಟಶರು ಅಷ್ಟು ಗಟ್ಟಿಯಾಗಿ ನಿಲ್ಲುವ ಕಾರಣವೂ ಭೂಮಧ್ಯ ಸಮುದ್ರದಲ್ಲಿ ರಶಿಯನ್ ಪ್ರಭಾವ ತಡೆಯುವ ಸಲುವಾಗಿಯೆ ಅಲ್ಲವೆ?

### ವಿಶ್ವಸ್ತಿಕೆಯ ಹುಡುಗಾಟಿಕೆ

ವಸಾಹತು ಪ್ರಜೆಗಳಾದ ನಮಗೆ ಸಂಬಂಧಿಸಿದ ಇನ್ನೊಂದು ವಿಷಯವಾದ ವಿಶ್ವಸ್ತ ಮಂಡಲದ ಪ್ರಶ್ನೆಯಲ್ಲಿಯೂ ಯುಕ್ತರಾಷ್ಟ್ರಗಳಲ್ಲಿ ಇರಿಸಿದ ಆಸೆ ದೂರ ದೂರವಾಗತೊಡಗಿದ. ವಿಶ್ವಸ್ತಿಕೆಯ ಹಕ್ಕು ಆಯಾ ವಸಾಹತುಗಳ ಹಿಂದಿನ ಆಳರಸರ ಕೈಗೇ ಒಪ್ಪಿಸಲ್ಪಡುವದು. ಎಲ್ಲ ಪರಾಧೀನ ರಾಷ್ಟ್ರಗಳ ಆಡಳಿತೆಯ ವಿಷಯದಲ್ಲಿಯೂ ವಿಶ್ವಸ್ತ ಮಂಡಲಕ್ಕೆ ಆಳುವ ರಾಜ್ಯಗಳು ವಾರ್ಷಿಕ ವರದಿ ಮಾಡಬೇಕೆಂಬ ಅಮೇರಿಕನ್ ಗೊತ್ತುವಳಿ ಸ್ವಿಕರಿಸಲ್ಪಟ್ಟುದು ನಿಜ. ಆದರೆ ಇದಕ್ಕೆ ಯಾವದೆ ನಿರ್ದಿಷ್ಟವಾದ ನಿಯಮ ಹಾಕಲ್ಪಟ್ಟಿಲ್ಲ. ಭದ್ರತಾಮಂಡಲದ ಕಾರ್ಯಕಲಾಪಗಳನ್ನು ನೋಡಿದರೆ ವಿಶ್ವಸ್ತಮಂಡಲದ ಕಾರ್ಯಕಲಾಪಗಳ ಭವಿಷ್ಯ ನುಡಿಯಲು ಜ್ಯೋತಿಃಶಾಸ್ತ್ರದ ಅರಿವೇ ಬೇಕಾಗಲಾರದು.

ಭದ್ರತಾ ಮಂಡಲದ ಕಾರ್ಯಕಲಾಪದಿಂದ ಯುರೋಪಿನಲ್ಲಿ ಪುನಃ ಸೋವಿಯೆಟ್ ರಶಿಯಾವನ್ನು ಏಕಾಕಿಯಾಗಿ ಮಾಡುವ ಪ್ರಯತ್ನ ನಡೆದಿದೆಯೆಂದು ಗೊತ್ತಾಯಿತು. ಸೋವಿಯೆಟ್ ವಿರೋಧಕ ರಾಜಕೀಯ ಒಳಸಂಚು ಸಾಕಷ್ಟು ಯಶಸ್ವಿಯೂ ಆಗಿದೆ. ಆದರೆ ಅವೇ ಕಾರಣದಿಂದ ಏಶಿಯಾದ ಕೋಟ್ಯಂತರ ಪ್ರಜೆಗಳ ಏಕಮಾತ್ರ ಮುಂದಾಳ್ತನ ರಶಿಯಾದ ಕೈಸೇರಿದಂತಾಯಿತು. ಈ ರಂಗದಿಂದ ಅಮೇರಿಕೆ ಸ್ವಕೃತಾಪರಾಧದಿಂದಲೇ ಹೊರತಳ್ಳಲ್ಪಡುತ್ತಿದೆ.

ಸೋವಿಯಟ್ ವಿರುದ್ಧ ರಾಜಕಾರಣದಲ್ಲಿ ಅಂಗ್ಲೋ ಫ್ರೆಂಚರು ಆಟವಾಡಿದ್ದರಿಂದಲೇ ಇದೀಗ ಮುಗಿದ ಘನಘೋರ ಯುದ್ಧಕ್ಕೆ ಅವಕಾಶವಾಯಿತು. ಇಂಡೊನೇಶಿಯಾಕ್ಕೆ ವಿಚಾರಣಾ ಮಂಡಲವನ್ನು ಕಳಿಸುವದರ ವಿರುದ್ಧ ಭದ್ರತಾ ಮಂಡಲ ನಿರ್ಣಯಿಸಿದೊಡನೆ ರಶಿಯನ ಪ್ರತಿನಿಧಿ ವಿಶಿನಿಸ್ಕಿಯವರು "ನಾವು ಹಳೆಯ ರಾಷ್ಟ್ರಸಂಘದ ಸ್ಥಿತಿಗೆ ಬರುತ್ತಿದ್ದೇವೆಂದು" ಎಚ್ಚರಿಸಿದ್ದು ಯೋಗ್ಯವೇಆಗಿದೆ. ಚಿಕ್ಕ ರಾಷ್ಟ್ರಗಳ ವಿರುದ್ಧ ಹಿರಿ ರಾಷ್ಟ್ರಗಳ ಸ್ವೇಚ್ಛಾಚಾರವನ್ನು ತಡೆಯಲುಭದ್ರತಾ ಮಂಡಲ-ದೊಡ್ಡ ರಾಷ್ಟ್ರಗಳ ದಾಕ್ಷಿಣ್ಯಕ್ಕೆ ಬಿದ್ದು, ಅಥವಾ ದೊಡ್ಡ ರಾಷ್ಟ್ರಗಳಲ್ಲಿ ಒಡಕು ಬರುವದೆಂದು ಹೆದರಿ—ಹಿಂದೆ ಮುಂದೆ ನೋಡಿದರೆ ಅದು ಹಳೆಯ ರಾಷ್ಟ್ರಸಂಘಕ್ಕಿಂತಲೂ ಭಯಂಕರವಾದ ಸಂಸ್ಥೆಯಾ[illegible] ಗೊಳ್ಳುವದು. ಆಗ ಇನ್ನೊಂದೆರಡು [illegible] ಆಗ ಕಳೆದ ಯುದ್ಧಕ್ಕಿಂತಲೂ ಘೋ[illegible]ದ ಇನ್ನೊಂದು ಯುದ್ಧದಲ್ಲಿ ಮಾನವ್ಯದ ರಕ್ತ ಹರಿಯದಿರದು.



ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು.